KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೭, ೨೦೦೯ (ಭಾದ್ರಪದ ೨೬, ಶಕ ವರ್ಷ ೧೯೩೧) | ಸಂಚಿಕೆ ೩೮ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**IN THE COURT OF THE 2ND TRAFFIC CHIEF METROPALITAN MAGISTRATE, BANGALORE CITY**

**Date:22nd August, 2009**

It is hereby notified for the information of the public that the under mentioned Two Wheeler and Four Wheeler which is in the custody of City Market Police station, Bangalore City. has unclaimed shall be confiscated to the Government and disposed to have is not claimed by the owner with proof of ownership with in three month from the date of the publication of the notification.

**1. City Market Police Station C.Misc No.14/2009 P.F. No.08/2009**

| Sl. No. | Type of Vehicle Regn. No. | Engine No. | Chassis No. | Colour |
|---|---|---|---|---|
| 1. | Bajaj Pulsar 150 KA-02-EJ-1668 | DHGBKC07533 | DHVBKC07570 | Black |
| 2. | Bajaj Pulsar 150 KA-51-E-3009 | DHGBME-46932 | DHVBMF48141 | Black |
| 3. | TVS Victor KA-04-EJ-4250 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Blue |
| 4. | TVS Victor KA-02-EP-7017 | OF4NG41054199 | DM625DF4441N53545 | Silver |
| 5. | Yamaha Entessor KA-02-EG-396 | 5VS010733 | 02JSVS010P33 | Meron |
| 6. | TVS Scooty KA-01-S-9224 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Green |
| 7. | Kawasaki Bajaj KA-02-EJ-4268 | DPMBKC80866 | DFFBKC24614 | Meron |
| 8. | Kinetic Honda ZX KA-04-J-416 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Green |
| 9. | RX Yamaha KA-01-J-5152 | ILI416281 | ILI416281-C-94 | Black |
| 10. | Kinetic Honda CHK-4980 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Blue |

| Sl. No. | Type of Vehicle Regn. No. | Engine No. | Chassis No. | Colour |
|---|---|---|---|---|
| 11. | Kinetic Honda KA-03-J-5875 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Blue |
| 12. | Honda Activa KA-03-EN-2695 | JF08E0472399 | ME4JF085E48460234 | Silver |
| 13. | Hero Honda CBZ KA-04-R-6431 | 00C40M00283 | 0034SC00489 | Blue |
| 14. | Yamaha KA-03-EK-4162 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Meron |
| 15. | TVS Scooty KA-05-X-4804 | K98GM17838 | K98CF176459 | Black |
| 16. | Suzuki Samurai KA-16-H-4411 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Black |
| 17. | TVS Scooty KA-01-L-6322 | KA97CM104988 | K97CF103484 | Orange |
| 18. | ನೊಂದಣಿ ಇಲ್ಲ ಟಿ.ವಿ.ಎಸ್. ಎಕ್ಸ್ಎಲ್. ಸೂಪರ್ | ಸ್ಪಷ್ಟವಾಗಿರುವುದಿಲ್ಲ | MD6214D6031LO8033 | Black |
| 19. | Bajaj Chetak CAT-6885 | ಸ್ಪಷ್ಟವಾಗಿರುವುದಿಲ್ಲ | ತುಕ್ಕು ಹಿಡಿದಿದೆ. | Cement |
| 20. | Kinetic Honda AP-11A-8025 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Cement |
| 21. | Suzuki Samurai KA-04-L-564 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Red |
| 22. | Bajaj Chetak CKS-2184 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Cement |
| 23. | Bajaj Chetak CKP-2357 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Cement |
| 24. | Suzuki Samurai KA-03-F-7861 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Black |
| 25. | Suzuki Samurai KA-03-W-7553 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Black |
| 26. | Bajaj Scooter KA-20-H-3127 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Blue |
| 27. | TVS XL Super KA-09-EB-7212 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Black |
| 28. | Kinetic Zing KA-05-EL-5813 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Meron |
| 29. | Suzuki Samurai KA-02-EL-3104 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Black |
| 30. | Suzuki Samurai KA-04-A-18 | 7510M515010 | 7510F47230 | Black |
| 31. | Yamaha KA-04-EA-6195 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Black |
| 32. | Yamaha Reg No. Not Known | LI277663 | LI277663 | Black |
| 33. | Kinetic Honda KA-04-H-2575 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Black |
| 34. | Kinetic Honda KA-01-R-3047 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Black |
| 35. | Bajaj Chetak Scooter CKO-6436 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Green |
| 36. | TVS Scooty KA-04-Q-9350 | K954M024645 | K95GF023970 | Blue |
| 37. | LML Scooter KA-04-H-9311 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Green |
| 38. | Yamaha KA-03-7722 | ILI354569 | ILI354569 | Black |
| 39. | Bajaj Saffire KA-05-EF-7524 | CFGBHA22045 | ಸ್ಪಷ್ಟವಾಗಿರುವುದಿಲ್ಲ | Blue |

**2. City Market Police Station N.C.No.02/2009 P.F.No.15/2009**

| Sl. No. | Type of Vehicle Regn. No. | Engine No. | Chassis No. | Colour |
|---|---|---|---|---|
| 1. | Thavera Car Reg.No. KA-13-MB-3724 | ಸ್ಪಷ್ಟವಾಗಿರುವುದಿಲ್ಲ | MA6AB6G765HOO9223 | Red |
| 2. | TATA Indica Car. Reg. No. KA-12-M-6022 | 475DIOBXZP08310 | 600141BX2P10765 | Light Golden |

**3. City Market Police Station C.Misc No.22/2009 P.F. No.18/2009**

| Sl. No. | Type of Vehicle Regn. No. | Engine No. | Chassis No. | Colour |
|---|---|---|---|---|
| 1. | Bajaj Chetak Scooter KA-05-H-5203 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | Cement Colour |
| 2. | Bajaj Chetak Scooter KA-02-Q-6978 | 06C95JJ36416 | 06C95331023 | Cement Colour |
| 3. | Bajaj Chetak Scooter KA-04-X-1875 | ಇಂಜಿನ್ ತುಕ್ಕು ಹಿಡಿದಿದೆ. | 06FBFC24361 | Cement Colour |
| 4. | Bajaj Chetak Scooter MER-705 | ಇಂಜಿನ್ ತುಕ್ಕು ಹಿಡಿದಿದೆ. | ತುಕ್ಕು ಹಿಡಿದಿದೆ. | Cement Colour |
| 5. | TVS-XL-KA-05-X-934 | ಇಂಜಿನ್ ತುಕ್ಕು ಹಿಡಿದಿದೆ. | ತುಕ್ಕು ಹಿಡಿದಿದೆ. | Green Colour |
| 6. | Kinetic Honda KA-05-X-1324 | ಇಂಜಿನ್ ತುಕ್ಕು ಹಿಡಿದಿದೆ. | ಇಂಜಿನ್ ತುಕ್ಕು ಹಿಡಿದಿದೆ. | Black Colour |
| 7. | Bajaj Pulsar T.N-20. K-6662 | DHGBKA74805 | DHVBKA74834 | Black Colour |
| 8. | Suzuki Samurai KA-05-EA-7368 | 7508M580880 | 7508F53735 | Black Colour |
| 9. | TVS Champ T.N.01-Q-7183 | ತುಕ್ಕು ಹಿಡಿದಿದೆ. | ತುಕ್ಕು ಹಿಡಿದಿದೆ. | Black Colour |
| 10. | Bajaj M-80 MJH-4200 | ಸ್ಪಷ್ಟವಾಗಿರುವುದಿಲ್ಲ | ಸ್ಪಷ್ಟವಾಗಿರುವುದಿಲ್ಲ | White |

Metropolitan Magistrate,
Traffic Court-II, Nrupathunga Road, Bangalore-1.

PR-834

**FORM NO.155**

**MEMBERS VOLUNTARY WINDING UP**

**Name of Company: Mangalore Power Company (in Liquidation)**

**NOTICE CONVENING FINAL MEETING**

Notice is hereby given in pursuance of Section 497 of the Companies Act, 1956 that a General Meeting of the Members of above named Company will be held at its registered office at 408, 4th Floor, Barton Centre, M.G. Road, Bangalore-560001 on the 25th day of September 2009 at 12.30 P.M. for the purpose of having an account laid before them showing the manner in which the winding up has been conducted and the property of the Company disposed off and of hearing any explanation that may be given by the Liquidator and also of determining by a Special Resolution of the Company the manner in which the books, accounts and documents of the Company and of the Liquidator shall be disposed off.

Dated this 25th day of August, 2009.

**Kamal Preet Sahni**
Liquidator
Mangalore Power Company (in Voluntary Liquidation)

**ನಮೂನೆ ಸಂಖ್ಯೆ–155**

**ಸ್ವತಃ ಸದಸ್ಯರಿಂದ ಅಂತ್ಯಗೊಳಿಸುವಿಕೆ**

**ಸಂಸ್ಥೆಯ ಹೆಸರು: ಮಂಗಳೂರು ಪವರ್ ಕಂಪನಿ (ಮುಚ್ಚುವ ಸ್ಥಿತಿಯಲ್ಲಿ)**

**ಸಂಸ್ಥೆಯ ಅಂತಿಮ ಸಭೆ ನಡೆಸುವ ಕುರಿತು ತಿಳುವಳಿಕೆ ಪತ್ರ.**

ಕಂಪನಿ ಕಾಯ್ದೆ 1956ರ ಪ್ರಕರಣ 497ರ ಅಡಿಯಲ್ಲಿ ಈ ಮೂಲಕ ತಿಳುವಳಿಕೆ ನೀಡುವುದೇನೆಂದರೆ ಮೇಲಿನ ಸಂಸ್ಥೆಯ ಸರ್ವ ಸದಸ್ಯರ ಸಭೆಯು ದಿನಾಂಕ:25ನೇ ಸೆಪ್ಟೆಂಬರ್ ಮಾಹೆ 2009 ರಂದು ಅಪರಾಹ್ನ 12–30 ಗಂಟೆಗೆ ಸಂಸ್ಥೆಯ ನೊಂದಾಯಿತ ಕಛೇರಿ ಸಂಖ್ಯೆ 408, 4ನೇ ಮಹಡಿ ಬಾರ್ಟನ್ ಸೆಂಟರ್ ಮಹಾತ್ಮಗಾಂಧಿ ರಸ್ತೆ, ಬೆಂಗಳೂರು–1 ಎಂಬಲ್ಲಿ ಸಂಸ್ಥೆಯ ಲೆಕ್ಕಪತ್ರಗಳನ್ನು ಸಭೆಯ ಮುಂದೆ ಮಂಡಿಸಿ ಮತ್ತು ಸಂಸ್ಥೆಯನ್ನು ಯಾವ ರೀತಿ ಮುಚ್ಚಲಾಗುತ್ತಿದೆ ಎಂದು ಮತ್ತು ಸಂಸ್ಥೆಯ ಆಸ್ತಿ–ಪಾಸ್ತಿಗಳನ್ನು ಯಾವ ಕ್ರಮದಲ್ಲಿ ವಿಲೇವಾರಿ ಮಾಡಲಾಯಿತು ಎಂದೂ ಮತ್ತು ವಿಲೇವಾರಿ ಮಾಡಿದ ಅಧಿಕಾರಿಯವರ ವಿವರಣೆಯೇನಾದರೂ ಇದ್ದಲ್ಲಿ ಆಲಿಸಲು ಮತ್ತು ಸಭೆಯ ನಡವಳಿಕೆಗಳನ್ನು ವಿಶೇಷವಾದ ಸಭಾಪಟ್ಟಿಯ ಮೂಲಕ ದಾಖಲಿಸಲು ಮತ್ತು ಸಂಸ್ಥೆಯ ಲೆಕ್ಕಪತ್ರಗಳನ್ನು ಅಂತಿಮವಾಗಿ ವಿಲೇವಾರಿ ಮಾಡಿರುವುದನ್ನು ಸಭೆಯಲ್ಲಿ ಚರ್ಚಿಸಲು ಕರೆಯಲಾಗಿದೆ.

ದಿನಾಂಕ:25ನೇ ಆಗಸ್ಟ್ 2009 **ಕಮಲ್ ಪ್ರೀತ್ ಸಹಾನಿ**

ವಿಲೇವಾರಿ ಅಧಿಕಾರಿ (ಲಿಕ್ವಿಡೇಟರ್)

ಪಿಡಿ–52 ಮಂಗಳೂರು ಪವರ್ ಕಂಪನಿ, (ಸ್ವಇಚ್ಛಾ ವಿಲೇವಾರಿ)

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/180/ಡಿಟಿಸಿಆರ್/2008–09, ದಿನಾಂಕ:15ನೇ ಜುಲೈ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ:** |
|---|---|
| ಪೊಲೀಸ್ ಉಪ ನಿರೀಕ್ಷಕರು, | ಶ್ರೀ ಮೋಹನ್ ದಾಸ್ ಶೆಟ್ಟಿ, ಐಕು ಮನೆ, |
| ಕೋಣಾಜೆ ಪೊಲೀಸ್ ಠಾಣೆ, ಕೋಣಾಜೆ. | (ಪರಾರಿಯಾಗಿರುತ್ತಾನೆ) |

**ಪ್ರಕರಣದ ಮುಖ್ಯಾಂಶಗಳು:**

ಪೊಲೀಸ್ ಉಪ ನಿರೀಕ್ಷಕರು, ಕೋಣಾಜೆ ಪೊಲೀಸ್ ಠಾಣೆ, ಕೋಣಾಜೆ ಇವರು ಖಚಿತ ವರ್ತಮಾನದ ಮೇರೆಗೆ ದಿನಾಂಕ:25.07.2008ರಂದು ಬೆಳಗ್ಗಿನ ಜಾವ 5–30ಕ್ಕೆ ರಸ್ತೆಕಾವಲು ನಡೆಸಿದ ಸಂದರ್ಭದಲ್ಲಿ ಮಂಗಳೂರು ತಾಲೂಕು ಅರೆಕಳ ಗ್ರಾಮದ ನ್ಯೂಪಡ್ಪು ಜಂಕ್ಷನ್‌ನಿಂದಾಗಿ ಕುತ್ತಾರ್ ಮೂಲಕ ಗ್ರಾಮ ಚಾವಡಿ ಕಡೆಗೆ ಮೋಹನ್‌ದಾಸ್ ಶೆಟ್ಟಿ, ಐಕುಮನೆ ಎಂಬವರು ನಂಬರ್ ಪ್ಲೇಟು ಇಲ್ಲದ ಕಪ್ಪು ಬಣ್ಣದ ಸ್ಕಾರ್ಪಿಯೋ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಹೇರಿಸಿಕೊಂಡು ಸಾಗಾಟ ಮಾಡುತ್ತಿದ್ದಾರೆ ಎಂಬ ಮಾಹಿತಿಯಂತೆ ಬೆಳಿಗ್ಗೆ 6–00 ಗಂಟೆ ಸಮಯಕ್ಕೆ ನಂಬರ್ ಪ್ಲೇಟು ಇಲ್ಲದ ಕಪ್ಪು ಬಣ್ಣದ ಸ್ಕಾರ್ಪಿಯೋ ವಾಹನ ಎಲಿಯಾರ್ ಪದವು ಕಡೆಯಿಂದ ಬರುತ್ತಿರುವುದನ್ನು ಕಂಡು ಸಂಶಯಗೊಂಡು, ಸದ್ರಿ ವಾಹನವನ್ನು ನಿಲ್ಲಿಸಲು ಕೈಸನ್ನೆ ಮಾಡಿದಾಗ ವಾಹನದ ಚಾಲಕನು ತಪ್ಪಿಸಿಕೊಳ್ಳುವ ಸಲುವಾಗಿ ವಾಹನವನ್ನು ನಿಲ್ಲಿಸದೇ ವೇಗವಾಗಿ ಗ್ರಾಮ ಚಾವಡಿ ಕಡೆಗೆ ಚಲಾಯಿಸಿದಾಗ ಸಿಬ್ಬಂಧಿ ಸಮೇತ ಪಂಚರೊಂದಿಗೆ ಸದ್ರಿ ವಾಹನವನ್ನು ಬೆನ್ನಟ್ಟಿಕೊಂಡು ಹೋಗಲಾಗಿ, ವಾಹನದ ಚಾಲಕನು ಸದ್ರಿ ವಾಹನವನ್ನು ಒಂದು ದೊಡ್ಡ ಮರಕ್ಕೆ ಡಿಕ್ಕಿಹೊಡೆದು ವಾಹನದ ಮುಂಭಾಗವನ್ನು ಜಖಂಗೊಳಿಸಿ, ಸದ್ರಿ ವಾಹನದಿಂದ ಇಳಿದು ಓಡಿಹೋಗಿದ್ದು, ಆತನನ್ನು ಹಿಡಿಯಲು ಬೆನ್ನಟ್ಟಿದ್ದರೂ ಸಿಗದೇ ಪರಾರಿಯಾಗಿರುತ್ತಾನೆ. ನಂತರ ವಾಹನವನ್ನು ಪರಿಶೀಲಿಸಲಾಗಿ ವಾಹನದ ಹಿಂಬದಿಯ ಸೀಟಿನಲ್ಲಿ 35 ಲೀಟರು ಗಾತ್ರದ 5 ಬಿಳಿ ಬಣ್ಣದ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಒಟ್ಟು 175.000 ಲೀಟರು ಮದ್ಯಸಾರವನ್ನು ಅಕ್ರಮವಾಗಿ ಸಾಗಾಟ ಮಾಡುತ್ತಿರುವುದನ್ನು ಪತ್ತೆಹಚ್ಚಿ, ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 13(1)(ಎ)(ಎಫ್) ರ ಪ್ರಕಾರ ಅಪರಾಧ ಹಾಗೂ ಕಲಂ 32, 34 ಮತ್ತು 43(1)(2) ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸದ್ರಿ ಮದ್ಯಸಾರ ಹಾಗೂ ಸಾಗಾಣಿಕೆಗೆ ಬಳಸಿದ ನಂಬರ್ ಪ್ಲೇಟು ಅಳವಡಿಸದೇ ಇರುವ ವಾಹನ ಸ್ಕಾರ್ಪಿಯೋ ಜೀಪನ್ನು ಪಂಚರ ಸಮಕ್ಷಮ ಇಲಾಖಾ ವಶಕ್ಕೆ ತೆಗೆದುಕೊಂಡು, ಜಪ್ತುಪಡಿಸಿದ ಮದ್ಯಸಾರದ ಮಾದರಿಗಳನ್ನು ತಯಾರಿಸಿ, ಸ್ಥಳದಲ್ಲಿಯೇ ಮಹಜರು ಜರುಗಿಸಿ ಪರಾರಿಯಾದ ಆರೋಪಿ ಮೋಹನ್‌ದಾಸ್ ಶೆಟ್ಟಿ, ಐಕುಮನೆ ಇವರ ವಿರುದ್ಧ ತಕ್ಷೀರು ಸಂಖ್ಯೆ:95/2008, ದಿನಾಂಕ:25.07.2008 ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ, ಮಹಜರು ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಜಪ್ತು ಪಡಿಸಿಕೊಂಡ ಸೊತ್ತುಗಳನ್ನು ಕರ್ನಾಟಕ ಅಬಕಾರಿ ಕಾಯಿದೆ ಅನ್ವಯ ಮುಟ್ಟುಗೋಲು ಹಾಕಿಕೊಳ್ಳುವರೇ ಮುಂದಿನ ಕ್ರಮ ಜರುಗಿಸಲು ಅಬಕಾರಿ ನಿರೀಕ್ಷಕರು,

ಮಂಗಳೂರು ದಕ್ಷಿಣ ವಲಯ–II ಇವರಿಗೆ ಹಸ್ತಾಂತರಿಸಲು ಪ್ರಾಧಿಕಾರದ ದಿನಾಂಕ:02.08.2008ರ ಆದೇಶದಂತೆ ಅನುಮತಿಯನ್ನು ಪಡೆದು ವಶಪಡಿಸಿಕೊಂಡ ವಾಹನ ಹಾಗೂ ಮದ್ಯಸಾರವನ್ನು ಅಬಕಾರಿ ನಿರೀಕ್ಷಕರು, ದಕ್ಷಿಣ ವಲಯ–II ಇವರಿಗೆ ಹಸ್ತಾಂತರಿಸಿರುತ್ತಾರೆ.

**ಜಪ್ತು ಪಡಿಸಿಕೊಂಡ ಸೊತ್ತುಗಳು**

1) ನೊಂದಾಣಿ ಸಂಖ್ಯಾ ಫಲಕ ಅಳವಡಿಸದೇ ಇರುವ ಕಪ್ಪು ಬಣ್ಣದ ವಾಹನ ಸ್ಕಾರ್ಪಿಯೋ ಜೀಪು (ಇಂಜಿನ್ ಸಂ: B574G43364 VSR No: MAITZ2BSL > 2G88389)

2) 35 ಲೀ ಗಾತ್ರದ 5 ಬಿಳಿಬಣ್ಣದ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಸುಮಾರು 175 ಲೀ ಮದ್ಯಸಾರ

ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನಕ್ಕೆ ಅಪರಾಧ ಸಂದರ್ಭದಲ್ಲಿ ನೊಂದಾಣಿ ಸಂಖ್ಯಾ ಫಲಕ (ನಂಬರ್ ಪ್ಲೇಟು) ಅಳವಡಿಸದೇ ಇದ್ದು, ಪ್ರಕರಣ ಸಂದರ್ಭದಲ್ಲಿ ಪ್ರಕರಣ ಪತ್ತೆಹಚ್ಚಿದ ಅಧಿಕಾರಿಗಳು ವಾಹನದ ಇಂಜಿನ್ ನಂಬರನ್ನು ಪರಿಶೀಲಿಸಿದ್ದು, ಸದ್ರಿ ಇಂಜಿನ್ ನಂಬರ್ B574G43364 VSR No:MAITZ2BSL>2G88389 ಆಗಿದ್ದು, ಸದ್ರಿ ನಂಬರಿನ ಆಧಾರದ ಮೇಲೆ ಪ್ರಕರಣದ ತನಿಖಾಧಿಕಾರಿಗಳು ವಾಹನದ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಣ್ಣೂರು ಇವರಿಂದ ಪಡೆಯಲಾಗಿದ್ದು,ಸದ್ರಿ ವರದಿಯ ಪ್ರಕಾರ ವಾಹನದ ನೊಂದಾಣಿ ಸಂ:KL-13R-7800 ಎಂಬುದಾಗಿ ಮತ್ತು Sri.Sudhakaran.K, Ramunni, Lal Vihar, TK 1/292, Parakkandy, Kannur ಇವರು ದಿ:23–8–2007ರಿಂದ ವಾಹನದ ಮಾಲೀಕರಾಗಿರುವುದಾಗಿ ದೃಡೀಕರಿಸಿ ವರದಿ ನೀಡಿರುತ್ತಾರೆ. ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನದ ನೊಂದಣಿ ಮಾಲೀಕರಾದ Mr.Sudhakaran.K, Ramunni, Lal Vihar TK 1/292, Parakkandy, Kannur ಇವರಿಗೆ ಪ್ರಾಧಿಕಾರದಿಂದ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಕಾರಣ ಕೇಳಿ ನೋಟಿಸನ್ನು ದಿನಾಂಕ:15.06.2009 ರಂದು ನೊಂದಣಿ ಅಂಚೆಯ ಮೂಲಕ ನೀಡಲಾಗಿದ್ದು, ಸದ್ರಿ ನೋಟಿಸು ದಿನಾಂಕ:19.06.2009ರಂದು ಜ್ಯಾರಿಯಾಗಿದ್ದು ಈ ಬಗ್ಗೆ ಅಂಚೆ ಸ್ವೀಕೃತಿ ಪತ್ರ ಪ್ರಾಧಿಕಾರದಲ್ಲಿ ದಿನಾಂಕ:22.06.2009ರಂದು ಸ್ವೀಕೃತವಾಗಿರುತ್ತದೆ. ಆದರೆ ಸದ್ರಿಯವರಿಂದ ಯಾವುದೇ ಸಮಂಜಾಯಿಷಿ ಉತ್ತರ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ.

ಪ್ರಕರಣ ಪತ್ತೆಹಚ್ಚಿದ ಪೊಲೀಸ್ ಉಪ ನಿರೀಕ್ಷಕರು ಜಪ್ತಾದ ಮದ್ಯಸಾರದ ಮಾದರಿಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ಕರ್ನಾಟಕ ಸರ್ಕಾರದ ಸಹಾಯಕ ರಸಾಯನ ವಿಶ್ಲೇಷಕರು, ಮಂಗಳೂರು ವಲಯ ಇವರು ನೀಡಿದ ವಿಶ್ಲೇಷಣಾ ವರದಿ ಸಂ:ಇ–423–5 ದಿನಾಂಕ:12.09.2008ರಲ್ಲಿ ಮಾದರಿಗಳಲ್ಲಿ ಮದ್ಯಸಾರದ ಪ್ರಮಾಣ 94.0% ಇರುವುದಾಗಿ ಹಾಗೂ ಮದ್ಯಸಾರವನ್ನು ಮಾದಕ ಪಾನೀಯಗಳ ತಯಾರಿಕೆಗೆ ಮತ್ತು ಇತರ ಕೈಗಾರಿಕಾ ಉಪಯೋಗಕ್ಕೆ ಬಳಸಬಹುದಾಗಿದೆ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ. ಸದ್ರಿ ವಿಶ್ಲೇಷಣಾ ವರದಿ ಮತ್ತು ಪ್ರಕರಣದ ಎಲ್ಲಾ ದಾಖಲಾತಿಗಳನ್ನು ಲಗತ್ತಿಸಿ, ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ–2 ರವರ ತನಿಖಾ ವರದಿ ಸಂ: ಇಎಕ್ಸ್‌ಇ:ಎಂಎಸ್‌ಅರ್–2:38:2008–09, ದಿನಾಂಕ:17.11.08ರ ವರದಿಯಲ್ಲಿ, ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ವಾಹನದ ಮಾಲೀಕತ್ವ ಕೋರಿ ಯಾರೂ ಬೇಡಿಕೆ ಸಲ್ಲಿಸದೇ ಇರುವುದರಿಂದ ಸದ್ರಿ ವಾಹನ ಮತ್ತು ಮದ್ಯಸಾರವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಲು ಶಿಫಾರಸ್ಸು ಮಾಡಿರುತ್ತಾರೆ. ಅದರಂತೆ ಪ್ರಾಧಿಕಾರದ ಆದೇಶ ಸಂ: ಎಸ್‌ಡಿಕೆ/ 180/ ಡಿಟಿಸಿಆರ್/2008–09, ದಿನಾಂಕ:15.01.2009ರಲ್ಲಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಸೊತ್ತುಗಳ ಪೈಕಿ ಸ್ಕಾರ್ಪಿಯೋ ವಾಹನ ಇದರ ಮುಟ್ಟುಗೋಲು ಪ್ರಕ್ರಿಯೆಯನ್ನು ಕಾಯ್ದಿರಿಸಿ, ಉಳಿದ 175ಲೀ ಮದ್ಯಸಾರ (ಮಾದರಿಗಳನ್ನು ಹೊರತುಪಡಿಸಿ) ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಎ ರಡಿಯಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಅಬಕಾರಿ ಉಪ ಅಧೀಕ್ಷಕರು, ಮಂಗಳೂರು ಉಪ ವಿಭಾಗ–1 ಇವರ ಸಮಕ್ಷಮ ನಾಶಪಡಿಸಲು ಆದೇಶಿಸಲಾಗಿರುತ್ತದೆ.

ತಕ್ಷೀರಿನಲ್ಲಿ ವಶಪಡಿಸಿಕೊಂಡ ವಾಹನ ಸ್ಕಾರ್ಪಿಯೋ ಇದಕ್ಕೆ ನೊಂದಾಣಿ ಫಲಕ ಸಂಖ್ಯೆ ಅಳವಡಿಸದೇ ಇದ್ದ ಮೇರೆಗೆ, ಸದ್ರಿ ವಾಹನದ ಇಂಜಿನ್ ನಂಬರ್ ಆಧಾರದಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ ಜಿಲ್ಲೆ ಇವರಿಂದ ಪಡೆಯಲಾದ ಬಿ ರಿಜಿಸ್ಟ್ರಾರ್ ವರದಿಯ ಪ್ರಕಾರ ವಾಹನದ ನೊಂದಣಿ ಸಂ: KL-13R-7800 ಎಂದು ತಿಳಿದು ಬಂದ ಮೇರೆಗೆ ಸದ್ರಿ ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ನೊಂದಣಿ ಮಾಲೀಕರಿಗೆ ಪ್ರಾಧಿಕಾರದಿಂದ ದಿನಾಂಕ:15.06.2009ರಂದು ನೀಡಲಾದ ಕಾರಣ ಕೇಳಿ ನೋಟಿಸಿಗೆ ವಾಹನದ ಮಾಲೀಕರಿಂದ ಯಾವುದೇ ಪ್ರತಿಕ್ರಿಯೆ ಲಭ್ಯವಿರುವುದಿಲ್ಲ.

ಪ್ರಕರಣ ದಾಖಲಾಗಿ ಈಗಾಗಲೇ ಸುಮಾರು 1 ವರ್ಷ ಅವಧಿ ಕಳೆದಿದ್ದರೂ ವಾಹನದ ಮಾಲೀಕರಾಗಲೀ ,ಮಾಲೀಕರ ಪರ ವಾರಸ್ಸುದಾರರಾಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿ ತಮ್ಮ ಸಾಕ್ಷಾಧಾರಗಳನ್ನು ಸಾಬೀತುಪಡಿಸಲು ಮುಂದೆ ಬಂದಿರುವುದಿಲ್ಲ.

1965ನೇ ಕರ್ನಾಟಕ ಅಬಕಾರಿ ಕಾಯ್ದೆ ಅಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ, ಅಥವಾ ಪತ್ತೆಯಾಗುವ ಸಾಧ್ಯತೆ ಇಲ್ಲದಿದ್ದಲ್ಲಿ ಪ್ರಕರಣವನ್ನು ಪತ್ತೆಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಫ್ತಾಗಿರುವ ಸೊತ್ತುಗಳು ತಮ್ಮದೆಂದು ಅವುಗಳು ಕಾನೂನು ಬದ್ಧವಾಗಿದೆಯೆಂದು ಸಾಕ್ಷಧಾರಗಳೊಂದಿಗೆ ಸಾಭೀತುಪಡಿಸದೇ ಇದ್ದಲ್ಲಿ, ಸದ್ರಿ ಸೊತ್ತುಗಳು, ಅಬಕಾರಿ ಕಾಯ್ದೆ ಕಲಂ 43ಸಿ ರ

ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ ಅಂತಹ ಸೊತ್ತುಗಳನ್ನು ಕಲಂ 43ಸಿ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಪ್ರಾಧಿಕಾರದಲ್ಲಿ ಲಭ್ಯವಾಗಿರುವ ದಾಖಲಾತಿಗಳ ಪ್ರಕಾರ ದಿನಾಂಕ:25.07.2008 ರಂದು ನೊಂದಾಣಿ ಸಂಖ್ಯಾ ಫಲಕ ಅಳವಡಿಸದೇ ಇರುವ, ಇಂಜಿನ್ ನಂಬರ್ B574G43364 VSR No:MAITZ2BSL>2G88389 ಎಂದು ನಮೂದಿಸಿರುವ ಕಪ್ಪು ಬಣ್ಣದ ಸ್ಕಾರ್ಪಿಯೋ ವಾಹನವನ್ನು ಅಕ್ರಮವಾಗಿ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೇ ಆರೋಪಿ ಮದ್ಯಸಾರವನ್ನು ಸಾಗಾಣಿಕೆ ಮಾಡುವುದಕ್ಕೆ ಬಳಸಿರುವುದನ್ನು ಪತ್ತೆಹಚ್ಚಿ, ಸದ್ರಿ ವಾಹನ ಮತ್ತು ಅಕ್ರಮ ಮದ್ಯಸಾರವನ್ನು ಸ್ಥಳ ಮಹಜರು ಮುಖೇನಾ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯ ಪ್ರಕಾರ ಮದ್ಯಸಾರ ಎಂದು ದೃಢಪಟ್ಟಿದ್ದು, ಸದ್ರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದರಿಂದ ಈ ಪ್ರಾದಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಮೇಲಿನ ವಿದ್ಯಾಮಾನಗಳ ಸಂದರ್ಭದಲ್ಲಿ ವಾಹನದ ಮುಟ್ಟುಗೋಲು ನಡವಳಿ ವಿಚಾರಣೆಯನ್ನು ಪ್ರಾರಂಭಿಸಿ ಅಭಿಯೋಗದ ಪರ ಪ್ರಕರಣ ದಾಖಲು ಪಡಿಸಿಕೊಂಡ ಒರ್ವ ಸಾಕ್ಷಿದಾರರನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿಯ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಪ್ರತಿರಕ್ಷಾ ಸಾಕ್ಷಿಗಳು ಹಾಜರಾಗದೇ ಇದ್ದುದರಿಂದ ಪ್ರತಿರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ:25.07.2008ರಂದು ಸಂಖ್ಯಾ ಫಲಕ ಅಳವಡಿಸದೇ ಇರುವ ಸ್ಕಾರ್ಪಿಯೋ ಜೀಪು ಇದರಲ್ಲಿ ಅಕ್ರಮವಾಗಿ ಯಾವುದೇ ರಹದಾರಿ ಪತ್ರವಿಲ್ಲದೆ 175.000 ಲೀಟರು ಮದ್ಯಸಾರವನ್ನು ಸಾಗಾಣಿಕೆ ಮಾಡಲಾಗಿದೆಯೇ?
2. ವಶಪಡಿಸಿಕೊಂಡಿರುವ ವಾಹನ ಮಾಲೀಕ ತಾನೆಂದು, ತನಗೆ ತಿಳಿಯದೇ ಅಕ್ರಮ ಮದ್ಯಸಾರ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?
3. ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ,ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:**

ಶ್ರೀ ಎ.ಸೈಪುಲ್ಲಾ, ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣೆ ಇವರು ದಿನಾಂಕ:08.07.2009ರಂದು ಈ ಪ್ರಾದಿಕಾರದ ಮುಂದೆ ಹಾಜರಾಗಿ ಇವರು ಪ್ರಕರಣದ ಫಿರ್ಯಾದುದಾರರಾಗಿದ್ದು, ತಮ್ಮ ಸಾಕ್ಷಿಯನ್ನು ನೀಡಿರುತ್ತಾರೆ. ದಿನಾಂಕ:04.04.2008ರಿಂದ 18.09.2008ರವರೆಗೆ ನಾನು ಕೋಣಾಜೆ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ:25.07.2008ರಂದು ಬೆಳಗ್ಗಿನ ಜಾವ 4–40 ಗಂಟೆಗೆ ಕುತ್ತಾರು ನ್ಯೂಪಡ್ಪು ಕಡೆಯಿಂದ ಗ್ರಾಮ ಚಾವಡಿ ರಸ್ತೆಯಲ್ಲಿ ಸ್ಪಿರಿಟ್ ಸಾಗಾಣಿ ಬಗ್ಗೆ ಖಚಿತ ವರ್ತಮಾನದ ಮೇರೆಗೆ 2 ಜನ ಪಂಚರನ್ನು ಕರೆಸಿಕೊಂಡು ಸಿಬ್ಬಂಧಿಯೊಂದಿಗೆ ಠಾಣೆಯಿಂದ ಹೊರಟು 5–30 ಗಂಟೆಗೆ ಕೋಣಾಜೆ ಸುಣ್ಣಕೋಡಿ ಎಂಬಲ್ಲಿ ಸದ್ರಿ ವಾಹನದ ಬರುವಿಕೆಗೆ ಕಾಯುತ್ತಿದ್ದಾಗ ಬೆಳಿಗ್ಗೆ 6–00 ಗಂಟೆ ಸಮಯಕ್ಕೆ ಒಂದು ನಂಬರ್ ಪ್ಲೇಟು ಇಲ್ಲದ ಸ್ಕಾರ್ಪಿಯೋ ವಾಹನ ನ್ಯೂಪಡ್ಪು ಕಡೆಯಿಂದ ಗ್ರಾಮಚಾವಡಿ ಕಡೆ ಬಂದಾಗ ನಿಲ್ಲಿಸಲು ಸೂಚನೆ ಕೊಟ್ಟಾಗ ನಿಲ್ಲಿಸದೇ ವೇಗವಾಗಿ ಹೋದಾಗ ನಾವು ನಮ್ಮ ಜೀಪಿನಲ್ಲಿ 1 ಕಿ.ಮಿ ದೂರ ಅದನ್ನು ತಡೆಯಲು ಹಿಂಬಾಲಿಸಿದಾಗ ಸದ್ರಿ ಸ್ಕಾರ್ಪಿಯೋ ವಾಹನ ರಸ್ತೆಬದಿ ನಿಂತಿತ್ತು. ಅದರಲ್ಲಿ ಮೋಹನದಾಸ ಶೆಟ್ಟಿ ಎಂಬವನು ಜಿಗಿದು ಓಡಲು ಪ್ರಯತ್ನಿಸಿದಾಗ ನಾವು ಹಿಂಬಾಲಿಸಿದರೂ ಸಿಗಲಿಲ್ಲ. ಕಾಡು ಪ್ರದೇಶದಲ್ಲಿ ಆತನು ಓಡಿ ಹೋದನು. ನಂತರ ವಾಹನ ತಪಾಸಣೆ ಮಾಡಲಾಗಿ ವಾಹನದ ಹಿಂಬದಿ ಸೀಟಿನ ಇರುವ ಕಡೆ 5 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಸ್ಪಿರಿಟ್ ತುಂಬಿದ್ದು ಕಂಡು ಬಂತು. ಸದ್ರಿ ಸ್ಪಿರಿಟನ್ನು ವಾಹನವನ್ನು ಪಂಚರ ಸಮಕ್ಷಮ ಮಹಜರು ತಯಾರಿಸಿ ಅದರಲ್ಲಿ ಮಾದರಿಗಾಗಿ ಪ್ರತಿಯೊಂದು 750 ಎಂಎಲ್‌ನ ಬಾಟಲಿಗಳಲ್ಲಿ 5 ಕ್ಯಾನುಗಳಿಂದ ಒಂದೊಂದು ಬಾಟಲಿಗಳನ್ನು ಮಾದರಿಗಾಗಿ ತೆಗೆದು ಬಾಟಲಿ ಮುಚ್ಚಳಗಳಿಗೂ ಕ್ಯಾನುಗಳಿಗೂ ಬಟ್ಟೆಯಿಂದ ಕಟ್ಟಿ ಇಲಾಖಾ ಸೀಲಿನಿಂದ ಸೀಲು ಮಾಡಲಾಯಿತು. ಸದ್ರಿ ಬಾಟಗಳಿಗೆ ಎ.ಬಿ.ಸಿ.ಡಿ.ಇ ಎಂದು ಗುರುತು ಮಾಡಲಾಯಿತು. ಕ್ಯಾನುಗಳಿಗೆ ಕ್ರ.ಸಂ:1 ರಿಂದ 5ರವರೆಗೆ ಸಂಖ್ಯಾ ಗುರುತು ನೀಡಲಾಯಿತು. ವಾಹನದ ಇಂಜಿನ್ ನಂಬರ್ ,ಚಾಸಿಸ್ ನಂಬರಿನ ಪರಿಶೀಲನೆ ಮಾಡಿ ಮಹಜರಿನಲ್ಲಿ ನಮೂದಿಸಿಕೊಂಡು ಸ್ಥಳ ಮಹಜರು ಬೆಳಿಗ್ಗೆ 6–30 ರಿಂದ 7–30 ರವರೆಗೆ ಮುಕ್ತಾಯಗೊಳಿಸಿರುತ್ತೇನೆ. ನಂತರ ಸದ್ರಿ ವಾಹನ ಹಾಗೂ ಸ್ಪಿರಿಟ್ ಕ್ಯಾನುಗಳನ್ನು ನನ್ನ ಠಾಣೆಗೆ ಒಯ್ದು ಸರ್ಕಾರದ ಪರ ನಾನು ಫಿರ್ಯಾದುದಾರನಾಗಿ ಠಾಣಾ ಕ್ರೈಂ ಸಂ:95/2008ರಂತೆ ಪ್ರಕರಣ ದಾಖಲಿಸಿರುತ್ತೇನೆ. ನಂತರ ಪಂಚ ಸಾಕ್ಷಿದಾರರ ಹೇಳಿಕೆಯನ್ನು ಪಡೆದಿರುತ್ತೇನೆ. ಈ ಪ್ರಕರಣದ ಪ್ರ.ಮಾ.ವ ಮಹಜರು, ಸೊತ್ತು, ಜಪ್ತು ವರದಿಯನ್ನು ಘನ ನ್ಯಾಯಾಲಯಕ್ಕೂ ಅದೇ ದಿನ ಒಪ್ಪಿಸಿರುತ್ತೇನೆ.

ದಿನಾಂಕ:26.07.2008ರಂದು ತನಿಖೆಯನ್ನು ಮುಂದುವರಿಸಿ ಸದ್ರಿ ಪ್ರಕರಣದಲ್ಲಿ ಅಮಾನತು ಪಡಿಸಿದ ವಾಹನ ಮತ್ತು ಸ್ಪಿರಿಟ್ ಸೊತ್ತುಗಳನ್ನು ಮುಟ್ಟುಗೋಲಿನ ಬಗ್ಗೆ ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ-2 ಇವರಿಗೆ ಹಸ್ತಾಂತರಿಸಲು ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ಇವರ ಪ್ರಾಧಿಕಾರಕ್ಕೆ ವರದಿ ಸಲ್ಲಿಸಿ ಕೋರಿರುತ್ತೇನೆ. ದಿನಾಂಕ:04.08.2008ರಂದು ಸದ್ರಿ ಪ್ರಕರಣದಲ್ಲಿ ಮಾದರಿಗಾಗಿ ತೆಗೆದ ಬಾಟಲಿಗಳನ್ನು ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರ ಕಛೇರಿಗೆ ಕಳುಹಿಸಿಕೊಟ್ಟಿರುತ್ತೇನೆ. ಮಹಜರನ್ನು ನೋಡುತ್ತಿದ್ದು ಅದನ್ನು ನಿಶಾನೆ ಪಿ-1 ಎಂದು, ಸಾಕ್ಷಿಯ ಸಹಿಯನ್ನು ನಿಶಾನೆ ಪಿ-1 ಎಂದು, ಪ್ರ.ಮಾ.ವ ವನ್ನು ನಿಶಾನೆ-2 ಎಂದು, ಸಹಿಯನ್ನು ನಿಶಾನೆ ಪಿ-2ಎ ಎಂದು ಗುರುತಿಸ ಲಾಯಿತು. ಈ ನ್ಯಾಯಾಲಯಕ್ಕೆ ಮುಟ್ಟುಗೋಲು ನಡವಳಿ ಬಗ್ಗೆ ಸಲ್ಲಿಸಿದ ವರದಿ ನಿಶಾನೆ ಪಿ-3 ಎಂದು, ಸಾಕ್ಷಿ ಸಹಿಯನ್ನು ನಿಶಾನೆ ಪಿ-3ಎ ಎಂದು ಗುರುತಿಸಲಾಯಿತು. ವಾಹನದಿಂದ ಇಳಿದು ಹೋದ ವ್ಯಕ್ತಿ ಮೋಹನದಾಸ ಶೆಟ್ಟಿ, ಐಕುಮನೆ ಎಂಬುದಾಗಿ ನಮ್ಮ ಸಿಬ್ಬಂಧಿಗಳು ತಿಳಿಸಿರುತ್ತಾರೆ. ದಿನಾಂಕ:08.09.2008ರಂದು ವಾಹನ ಅಪಘಾತವಾದ ಬಗ್ಗೆ ಮೋಟಾರು ವಾಹನ ಇಲಾಖೆಯಿಂದ ವರದಿ ಪಡೆದುಕೊಂಡಿರುತ್ತೇನೆ. ಸದ್ರಿ ನಾವು ವಶಪಡಿಸಿಕೊಂಡ ಸಂದರ್ಭ ಈ ವಾಹನ ಅಪಘಾತಕ್ಕೆ ಒಳಪಟ್ಟು ವಾಹನ ಚಾಲಕರು ಯಾರೂ ಇಲ್ಲದ ಸ್ಥಿತಿಯಲ್ಲಿ ವಶಪಡಿಸಲಾಗಿದ್ದು ದಿನಾಂಕ:08.09.2008 ರಂದು ಸದ್ರಿ ವಾಹನದ ಅಪಘಾತದಿಂದ ಆದ ಬಗ್ಗೆ ಪರಿಶೀಲನಾ ಹಾಗೂ ಸಾರಿಗೆ ಅಧಿಕಾರಿಗಳ ವರದಿಯನ್ನು ಪಡೆದಿರುತ್ತೇನೆ, ದಿನಾಂಕ:12.09.2008ಕ್ಕೆ ಪ್ರಾದೇಶಿಕ ಸಾರಿಗೆ ನಿರೀಕ್ಷಕರು ತಪಾಸಣಾ ವರದಿಯನ್ನು ನೀಡಿದ್ದು,ಅದರ ಪ್ರತಿಯನ್ನು ಈ ದಿವಸ ನ್ಯಾಯಾಲಯಕ್ಕೆ ಹಾಜರುಪಡಿಸುತ್ತೇನೆ. ವಾಹನವನ್ನು ನೋಡಿದರೇ ಗುರುತಿಸುತ್ತೇನೆ. ವಾಹನವನ್ನು ಮುದ್ದೆ ಮಾಲು 1 ಎಂದು ಗುರುತಿಸಲಾಯಿತು. ಸದ್ರಿ ದಿನಾಂಕ:12.09.2008ರ ಮೋಟಾರು ವಾಹನ ಅಪಘಾತದ ಪ್ರತಿಯನ್ನು ಈ ದಿವಸ ಪ್ರಾಧಿಕಾರಕ್ಕೆ ಹಾಜರುಪಡಿಸಿ ಅದನ್ನು ನೋಡುತ್ತಿದ್ದು, ಸದ್ರಿ ವರದಿಯನ್ನು ನಿಶಾನೆ ಪಿ-4 ಎಂದು ಗುರುತಿಸಲಾಯಿತು. ಸದ್ರಿ ವರದಿಯ ಆಧಾರದಲ್ಲಿ ವಶಪಡಿಸಿದ ವಾಹನವು ನೊಂದಾವಣಿ ಆಗಿಲ್ಲ ಎಂದು ಕಂಡು ಬರುತ್ತದೆ. ನಂತರ ದಿನಾಂಕ:18.09.2008ರಂದು ಪ್ರಕರಣದ ಮುಂದಿನ ತನಿಖೆಯನ್ನು ಸೊತ್ತುಗಳೊಂದಿಗೆ ಪಿ.ಎಸ್.ಐ ಶ್ರೀ.ಲೋಹರ್ ಇವರಿಗೆ ಒಪ್ಪಿಸಿರುತ್ತೇನೆ.

**ಪಾಟೀ ಸವಾಲು:** ಈ ವಾಹನಕ್ಕೆ ವಾರಸುದಾರರು ಯಾರೂ ಮುಂದೆ ಬಂದು ತಮ್ಮದೆಂದು ಬೇಡಿಕೆ ಸಲ್ಲಿಸದೇ ಇರುವುದರಿಂದ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು.

ಈ ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ದಿನಾಂಕ:25.07.2008ರಂದು ಜಪ್ತು ಸಂದರ್ಭದಲ್ಲಿ ನೊಂದಾಣಿ ಸಂಖ್ಯಾ ಫಲಕ ಅಳವಡಿಸದೇ ಇದ್ದ ಹಾಗೂ ತದನಂತರದಲ್ಲಿ ಬಿ ಎಕ್ಸ್‌ಟ್ರಾಕ್ಟ್ ವರದಿಯಂತೆ KL-13R-7800 ಎಂಬ ನೊಂದಾಣಿ ಸಂಖ್ಯೆ ಇರುವ ಸ್ಕಾರ್ಪಿಯೋ ವಾಹನದಲ್ಲಿ ಅಕ್ರಮವಾಗಿ ಮದ್ಯಸಾರ ಸಾಗಾಣಿಕೆಯಾಗಿರುವುದು ಸಾಭೀತಾಗಿರುವುದರಿಂದ ಒಂದನೇ ಅಂಶವನ್ನು ಗುಣತ್ಮಾಕವಾಗಿ ಪರಿಗಣಿಸಲಾಗಿದೆ.

ಪ್ರಕರಣ ಸಂದರ್ಭದಲ್ಲಿ ವಾಹನಕ್ಕೆ ನೊಂದಾಣಿ ಪ್ಲೇಟು ಅಳವಡಿಸದೇ ಇದ್ದ ಪ್ರಯುಕ್ತ ವಾಹನದ ಇಂಜಿನ್ ಸಂಖ್ಯೆ ಅಧಾರದ ಮೇಲೆ ವಾಹನದ ನೊಂದಾಣಿ ಸಂಖ್ಯೆಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಕಣ್ಣೂರು ಇವರಿಂದ ಪಡೆದ ಬಿ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ KL-13R-7800 ಎಂದು ನೊಂದಾಣಿ ನಮೂದಿಸಿರುವ ವಾಹನದ ಮಾಲೀಕರಿಗೆ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 43ಬಿ ಪ್ರಕಾರ ನೀಡಲಾದ ಕಾರಣ ಕೇಳಿ ನೋಟಿಸಿಗೆ ಸದ್ರಿಯವರಿಂದ ಯಾವುದೇ ಪ್ರತಿಕ್ರಿಯೆ ವ್ಯಕ್ತವಾಗದೇ ಇರುವುದು ಹಾಗೂ ಅರೋಪಿತ ವ್ಯಕ್ತಿ ಕೂಡಾ ಜಪ್ತಾದ ಸೊತ್ತುಗಳ ಬಗ್ಗೆ ತನ್ನ ಮಾಲೀಕತ್ವದ ಕೋರಿ ಪುರಾವೆಗಳನ್ನು ಒದಗಿಸಿ ತನ್ನ ನಿರಪಾರಾಧಿತ್ವವನ್ನು ಸಾಬೀತು ಪಡಿಸಲು ವಿಫಲರಾಗಿರುವುದನ್ನು ಗಮನಿಸಿದಾಗ ಆರೋಪಿತ ವ್ಯಕ್ತಿಯು ಉದ್ದೇಶ ಪೂರ್ವಕವಾಗಿ ಸದ್ರಿ ವಾಹನವನ್ನು, ನೊಂದಾಣಿ ಸಂಖ್ಯಾ ಫಲಕವನ್ನು ಅಳವಡಿಸದೇ ತನ್ನ ತಿಳುವಳಿಕೆಯಿಂದಲೇ ಅಕ್ರಮ ಮದ್ಯಸಾರ ಸಾಗಾಣಿಕೆಗೆ ಮಾಡಿರುವುದು ಕಂಡುಬರುತ್ತದೆ. ನಂತರದಲ್ಲಿ ಜಪ್ತು ವಾಹನ ಮತ್ತು ಸೊತ್ತುಗಳನ್ನು ತನ್ನ ಸುಪರ್ಧಿಗೆ ಪಡೆದುಕೊಳ್ಳಲು ಮತ್ತು ತಕ್ಷೀರನ್ನು ನಡೆಸಲು ಯಾರೊಬ್ಬರೂ ಪ್ರಯತ್ನ ಪಡದೇ ಇರುವುದರಿಂದ ಅಕ್ರಮ ಮದ್ಯಸಾರ ಸಾಗಾಣಿಕೆಗೆ ಸದ್ರಿ ವಾಹನವನ್ನು ಬಳಸಿರುವುದು ಅನುಮಾನಕ್ಕೆ ಎಡೆಯಿಲ್ಲದಂತೆ ಸಾಬೀತಾಗಿರುವುದರಿಂದ, ಪ್ರಕರಣ ಸಂದರ್ಭದಲ್ಲಿ ನೊಂದಾಣಿ ಪ್ಲೇಟು ಅಳವಡಿಸದೇ ಇರುವ ಹಾಗೂ ತದನಂತರದಲ್ಲಿ ತನಿಖೆಯಿಂದ KL-13-R-7800 ಎಂದು ನೊಂದಾಣಿ ಸಂಖ್ಯೆ ದೃಡೀಕೃತವಾಗಿರುವ ಹಾಗೂ ಇಂಜಿನ್ ಸಂಖ್ಯೆ:B574G43364 VSR No:MAITZ2BSL>2G88389 ಎಂದು ನಮೂದಿಸಿರುವ ಕಪ್ಪು ಬಣ್ಣದ ಸ್ಕಾರ್ಪಿಯೋ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಹಾಗೂ ಯೋಗ್ಯವೆಂದು ತೀರ್ಮಾನ ತೆಗೆದುಕೊಂಡು ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್‌ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪೊಲೀಸ್ ಉಪ ನಿರೀಕ್ಷಕರು, ಕೋಣಾಜೆ ಪೊಲೀಸ್ ಠಾಣೆ ಇವರ ಕ್ರೈಂ ಸಂ:95/2008, ದಿನಾಂಕ:25.07.2008ರಲ್ಲಿ ಜಪ್ತು ಸಂದರ್ಭದಲ್ಲಿ ನೊಂದಣಿ

ಸಂಖ್ಯೆ ಅಳವಡಿಸದೇ ಇರುವ ಹಾಗೂ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ವಾಹನದ ಇಂಜಿನ್ ಸಂ:B574G43364 VSR No:MAITZ2BSL> 2G88389 ಇದರ ಆಧಾರದ ಮೇಲೆ ಪಡೆಯಲಾದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ನಮೂದಿಸಿರುವ ನೊಂದಣಿ ಸಂ: KL-13-R-7800 ಸ್ಕಾರ್ಪಿಯೋ ವಾಹನವನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಸಿ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:15.07.2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹ್ಮಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–I: ಶ್ರೀ ಎ. ಸೈಪುಲ್ಲಾ
ಪೊಲೀಸ್ ಉಪ ನಿರೀಕ್ಷಕರು, ಉಳ್ಳಾಲ ಪೊಲೀಸ್ ಠಾಣೆ, ಉಳ್ಳಾಲ.

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | |
|---|---|
| ನಿಶಾನೆ ಪಿ–I | : ಮಹಜರು ಪ್ರತಿ |
| ನಿಶಾನೆ ಪಿ–Iಎ | : ಅದರ ಮೇಲಿನ ಸಹಿ |
| ನಿಶಾನೆ ಪಿ–2 | : ಪ್ರಥಮ ವರ್ತಮಾನ ವರದಿ |
| ನಿಶಾನೆ ಪಿ–2ಎ | : ಅದರ ಮೇಲಿನ ಸಹಿ |
| ನಿಶಾನೆ ಪಿ–3 | : ನ್ಯಾಯಾಲಯಕ್ಕೆ ಮುಟ್ಟುಗೋಲು ನಡವಳಿ ಬಗ್ಗೆ ಸಲ್ಲಿಸಿದ ವರದಿ |
| ನಿಶಾನೆ ಪಿ–3ಎ | : ಅದರ ಮೇಲಿನ ಸಹಿ |
| ನಿಶಾನೆ ಪಿ–4 | : ಮೋಟಾರ್ ವಾಹನ ಅಪಘಾತ ವರದಿಯ ಪ್ರತಿ |

**ಅನುಬಂಧ–III**

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:
ಅರ್ಜಿದಾರರ ಹೇಳಿಕೆ : – ಯಾವುದು ಇಲ್ಲ–

**ಅನುಬಂಧ–IV**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು : – ಯಾವುದು ಇಲ್ಲ–

**ನೂರ್ ಮಹ್ಮಮದ್ ಹುಸೇನ್**

ಪಿ.ಆರ್.736

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ,**
**ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/225/ಡಿಟಿಸಿಆರ್/2008–09, ದಿನಾಂಕ:22ನೇ ಜುಲೈ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿಗಳು:** |
|---|---|
| ಅಬಕಾರಿ ಉಪ ನಿರೀಕ್ಷಕರು (1),<br>ಮಂಗಳೂರು ಉತ್ತರ ವಲಯ–1, ಮಂಗಳೂರು. | 1) ಜಯಕರ ಆರ್. ಶೆಟ್ಟಿ, ಬಿನ್ ರಾಮಣ್ಣ ಶೆಟ್ಟಿ,<br>2) ಜ್ಞಾನಜ್ಯೋತಿ ನಿಲಯ, ಜ್ಯೋತಿನಗರ, ಕುಂಜತ್ ಬೈಲ್ ಗ್ರಾಮ ಮತ್ತು ಅಂಚೆ, ಮಂಗಳೂರು ತಾಲೂಕು,<br>(ವಾಹನದ ಮಾಲೀಕ)<br>2) ಅರುಣ್ ಡಿಸೋಜ, ಬಿನ್ ಫ್ರಾನ್ಸಿಸ್ ಡಿಸೋಜ,<br>ಜ್ಯೋತಿ ನಗರ, ಪಂಜಿಮೊಗರು,<br>ಮಂಗಳೂರು ತಾಲ್ಲೂಕು. (ತಲೆ ಮರೆಸಿಕೊಂಡಿರುತ್ತಾನೆ) |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು(1),ಮಂಗಳೂರು ಉತ್ತರ ವಲಯ–1 ಇವರು ದಿನಾಂಕ:25.01.2009 ರಂದು ಮಂಗಳೂರು ತಾಲ್ಲೂಕು ಕುಂಜತ್ತ್‌ಬೈಲ್ ಗ್ರಾಮದ ಮರಕಡ ಜಂಕ್ಷನ್ ಬಳಿ ಗಸ್ತು ನಡೆಸುತ್ತಿರುವ ಸಂದರ್ಭದಲ್ಲಿ ಮರವೂರು ಕಡೆಯಿಂದ ಕಾವೂರು ಕಡೆಗೆ ಒಂದು ಗೂಡ್ಸ್ ಟೆಂಪೋ ಬರುವುದನ್ನು ಗಮನಿಸಿ, ಅದನ್ನು ನಿಲ್ಲಿಸಲು ಸೂಚಿಸಿದಾಗ ವಾಹನದ ಚಾಲಕನು ವಾಹನವನ್ನು ಮರಕಡ ಜಂಕ್ಷನ್ ಬಳಿ ನಿಲ್ಲಿಸಿ ತಕ್ಷಣ ಚಾಲಕ ಮತ್ತು ವಾಹನದಲ್ಲಿದ್ದ ಇನ್ನೊಬ್ಬ ವ್ಯಕ್ತಿಯು ಓಡಲು ಪ್ರಯತ್ನಿಸಿದ್ದಾಗ ಸಿಬ್ಬಂದಿಗಳು ಚಾಲಕನನ್ನು ಹಿಡಿಯಲು ಸಫಲರಾಗಿ ಇನ್ನೊರ್ವ ವ್ಯಕ್ತಿಯು ತಲೆಮರೆಸಿಕೊಂಡಿರುತ್ತಾನೆ. ನಂತರ ಹಿಡಿಯಲ್ಪಟ್ಟ ವ್ಯಕ್ತಿಯ ಸಮ್ಮುಖದಲ್ಲಿ ವಾಹನವನ್ನು ತಪಾಸಣೆ ಮಾಡಲು ಮಾನ್ಯ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆಯಲು ಕಾಲಾವಕಾಶವಿಲ್ಲದೇ ಇರುವ ಕಾರಣ ಸ್ಥಳದಲ್ಲಿಯೇ ಸರ್ಚ್ ಮೆಮೋ ತಯಾರಿಸಿ ವಾಹನವನ್ನು ಶೋಧಿಸಿದಾಗ, ವಾಹನದ ಹಿಂಬದಿಯ ಭಾಗದಲ್ಲಿ 35 ಲೀಟರು ಸಾಮರ್ಥ್ಯದ 8 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಸುಮಾರು 280 ಲೀಟರು ಕಳ್ಳಭಟ್ಟಿ ಸಾರಾಯಿಯನ್ನು ಪತ್ತೆ ಹಚ್ಚಿ, ಇದು ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಟವೆಂಬುದಾಗಿ ಖಚಿತಪಡಿಸಿಕೊಂಡು,ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 1965ರ ಕಲಂ 11, 13 ಮತ್ತು 14ರ ಪ್ರಕಾರ ಅಪರಾಧ ಹಾಗೂ ಕಲಂ 32, 34 ಮತ್ತು 38(ಎ)ರ ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸದ್ರಿ ವಾಹನ ಮತ್ತು 280.000 ಲೀಟರು ಕಳ್ಳಭಟ್ಟಿ ಸಾರಾಯಿಯನ್ನು ಜಪ್ತುಮಾಡಿ, ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ, ವಾಹನದಲ್ಲಿದ್ದ ಬಂಧಿತ ಆರೋಪಿಯಾದ ಬಿ.ಜಯಕರ ಶೆಟ್ಟಿ, ಬಿನ್ ರಾಮಣ್ಣ ಶೆಟ್ಟಿ, ಜ್ಞಾನಜ್ಯೋತಿ ನಿಲಯ, ಜ್ಯೋತಿ ನಗರ, ಕುಂಜತ್ತ್‌ಬೈಲ್ ಗ್ರಾಮ ಮತ್ತು ಅಂಚೆ, ಮಂಗಳೂರು ತಾಲ್ಲೂಕು ಮತ್ತು ಸದ್ರಿ ವ್ಯಕ್ತಿಯು ನೀಡಿದ ಮಾಹಿತಿಯಂತೆ ಓಡಿಹೋದ ವಾಹನದ ಚಾಲಕ ಇನ್ನೊರ್ವ ವ್ಯಕ್ತಿ ಅರುಣ್ ಡಿಸೋಜ,ಬಿನ್: ಪ್ರಾನ್ಸಿಸ್ ಡಿಸೋಜ, ಜ್ಯೋತಿ ನಗರ, ಪಂಜಿ ಮೊಗರು, ಮಂಗಳೂರು ತಾಲೂಕು ಇವರುಗಳ ವಿರುದ್ದ ತಕ್ಷೀರು ಸಂಖ್ಯೆ: 28/08–09, ದಿನಾಂಕ:25.01.2009 ರಂದು ಮೊಕದ್ದಮೆಯನ್ನು ದಾಖಲಿಸಿ ಕೊಂಡು ಪ್ರಥಮ ಮಾಹಿತಿ ವರದಿ, ಮಹಜರು ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಸದ್ರಿ ಸೊತ್ತುಗಳನ್ನು ಅಂತಿಮ ವರದಿ ಸಲ್ಲಿಸುವ ತನಕ ಅವರ ಸ್ವಾಧೀನದಲ್ಲಿಟ್ಟುಕೊಳ್ಳಲು ಪ್ರಾಧಿಕಾರದಲ್ಲಿ ಅನುಮತಿ ಕೋರಿದ ಮೇರೆಗೆ ಪ್ರಾಧಿಕಾರದ ದಿನಾಂಕ:07.02.2009ರ ಆದೇಶದಲ್ಲಿ ಅನುಮತಿಯನ್ನು ನೀಡಲಾಗಿರುತ್ತದೆ.

**ಸೊತ್ತುಗಳ ವಿವರ**

1) ಬಜಾಜ್ ನಿರ್ಮಿತ ತ್ರಿವೀಲ್ಡರ್ ಗೂಡ್ಸ್ ಟೆಂಪೋನೊಂದಣಿಸಂ:KA-19-B-6315

2) 35 ಲೀಟರು ಗಾತ್ರದ 8 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಒಟ್ಟು 280.000 ಲೀಟರು ಕಳ್ಳಭಟ್ಟಿ ಸಾರಾಯಿ.

(ಸದ್ರಿ ಪ್ರತಿ ಕ್ಯಾನಿನಿಂದ ತಲಾ ಒಂದೊಂದರಂತೆ 750 ಎಂ.ಎಲ್. ನ 8 ಬಾಟಲಿಗಳಲ್ಲಿ ಕಳ್ಳಭಟ್ಟಿ ಸಾರಾಯಿಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಮಾದರಿ ತೆಗೆಯಲಾಗಿದೆ)

ತಕ್ಷೀರಿನಲ್ಲಿ ವಶಪಡಿಸಿಕೊಂಡ ಬಜಾಜ್ ನಿರ್ಮಿತ ತ್ರಿ ವೀಲ್ಡರ್ ಗೂಡ್ಸ್ ಟೆಂಪೋ ನೊಂದಣಿ ಸಂ: KA-19-B-6315 ಇದರ ನೊಂದಾಣಿ ಮಾಲೀಕರೆಂದು ಹೇಳಿಕೊಂಡ ಶ್ರೀ ಜಯಕರ ಆರ್.ಶೆಟ್ಟಿ, ಬಿನ್:ರಾಮಣ್ಣ ಶೆಟ್ಟಿ, ವಾಸ:ಜ್ಞಾನ ಜ್ಯೋತಿ, ಜ್ಯೋತಿನಗರ, ಕುಂಜತ್ತ್‌ಬೈಲ್ ಅಂಚೆ, ಬಜಪೆ ರಸ್ತೆ, ಕಾವೂರು,ಮಂಗಳೂರು ಇವರ ದಿನಾಂಕ:06.03.2009 ರಂದು ತಮ್ಮ ವಕೀಲರ ಮೂಲಕ ಅರ್ಜಿಯನ್ನು ಸಲ್ಲಿಸಿ, ಸದ್ರಿ ವಾಹನ ಚಾಲನೆಗೆ ಶ್ರೀ ಜಾನ್ ಡಿಸೋಜ ಎಂಬವರನ್ನು ಚಾಲಕರನ್ನಾಗಿ ನಿಯಮಿಸಿ ಸಾರ್ವಜನಿಕರಿಗೆ ಬಾಡಿಗೆಗೆ ಇಡಲಾದ ವಾಹನವಾಗಿದ್ದು, ಸದ್ರಿ ವಾಹನವನ್ನು ಅಕ್ರಮ ಸೊತ್ತು ಸಾಗಾಟಕ್ಕೆ ಬಳಸಲಾಗಿರುವುದಿಲ್ಲ, ಹಾಗೂ ಹೊರಿಸಲಾದ ಅಪರಾಧವು ಸಮಂಜಸವಲ್ಲವೆಂದು ತಿಳಿಸಿ, ಜೀವನಾಧಾರವಾದ ಸದ್ರಿ ವಾಹನವನ್ನು ಮಧ್ಯಂತರ ಬಿಡುಗಡೆ ಮಾಡಿಕೊಡಬೇಕಾಗಿ ಪ್ರಾಧಿಕಾರದೊಂದಿಗೆ ವಿನಂತಿಸಿಕೊಂಡಿರುತ್ತಾರೆ. ಸದ್ರಿ ಅರ್ಜಿಯ ಬಗ್ಗೆ ತಮ್ಮ ಆಕ್ಷೇಪಣೆಗಳನ್ನು ಸಲ್ಲಿಸುವಂತೆ ಪ್ರಕರಣದ ತನಿಖಾದಿಕಾರಿಗಳಿಗೆ ದಿನಾಂಕ:09.03.2009ರಲ್ಲಿ ಜ್ಞಾಪನ ಪತ್ರ ನೀಡಲಾಗಿದ್ದು, ಸದ್ರಿ ಪತ್ರಕ್ಕೆ ಪ್ರಕರಣದ ತನಿಖಾಧಿಕಾರಿಗಳಾದ ಅಬಕಾರಿ ಉಪ ನಿರೀಕ್ಷಕರು(1) ಮಂಗಳೂರು ಉತ್ತರ ವಲಯ–1 ರವರು ದಿನಾಂಕ:01.04.2009ರಂದು ವಿವರಣೆಗಳನ್ನು ನೀಡಿ ವಾಹನವನ್ನು ಮಾಲೀಕರಿಗೆ ಮಧ್ಯಂತರ ಬಿಡುಗಡೆಗೊಳಿಸಬಾರದೆಂದು ತಮ್ಮ ಸ್ವಷ್ಟ ಅಭಿಪ್ರಾಯವನ್ನು ನೀಡಿರುತ್ತಾರೆ.

ಪ್ರಕರಣದಲ್ಲಿ ಜಪ್ತಾದ ವಾಹನ ಬಜಾಜ್ ನಿರ್ಮಿತ ತ್ರಿವೀಲ್ಡರ್ ಗೂಡ್ಸ್ ಟೆಂಪೋ ನೊಂದಣಿ ಸಂ: KA-19-B-6315 ಇದರ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ತನಿಖಾದಿಕಾರಿಗಳು, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ.ಕ.ಜಿಲ್ಲೆ ಇಲ್ಲಿಂದ ಪಡೆದು ಪ್ರಾದಿಕಾರಕ್ಕೆ ಸಲ್ಲಿಸಿದ್ದು, ಸದ್ರಿ ವರದಿಯ ಪ್ರಕಾರ ಶ್ರೀ ಜಯಕರ ಶೆಟ್ಟಿ, ಬಿನ್ ರಾಮಣ್ಣ ಶೆಟ್ಟಿ, ಧ್ಯಾನ ಜ್ಯೋತಿ, ಜ್ಯೋತಿ ನಗರ, ಕುಂಜತ್ ಬೈಲ್ ಅಂಚೆ, ಬಜಪೆ ರಸ್ತೆ, ಕಾವೂರು, ಮಂಗಳೂರು ಇವರು ದಿನಾಂಕ:09.11.2006ರಿಂದ ಅನ್ವಯವಾಗುವಂತೆ ವಾಹನದ ಮಾಲೀಕರಾಗಿರುವುದಾಗಿ ಹಾಗೂ ಮೆ:ಮಹೀಂದ್ರ ಅಂಡ್ ಮಹೀಂದ್ರ ಪೈನಾನ್ಸ್ ಸರ್ವಿಸ್ ಲಿಮಿಟೆಡ್, ಬೆಂಗಳೂರು ಇವರು ವಾಹನದ ಹೆಚ್.ಪಿ.ಎ. ದಾರರಾಗಿರುವುದಾಗಿ ತಿಳಿದು ಬಂದಿರುತ್ತದೆ. ವಾಹನದ ಮಾಲೀಕರಿಗೆ ಮತ್ತು ಹೆಚ್.ಪಿ.ಎ ದಾರರಿಗೆ ದಿನಾಂಕ:08.04.2009ರಂದು ಪ್ರಾದಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಬಿ ಪ್ರಕಾರ ಕಾರಣ ಕೇಳಿ ನೋಟಿಸುಗಳನ್ನು ನೀಡಿದ್ದು, ಸದ್ರಿ ನೋಟಿಸು ವಾಹನದ ಮಾಲೀಕರಿಗೆ

ದಿನಾಂಕ:16.04.2009ರಂದು ಹಾಗೂ ಹೆಚ್.ಪಿ.ಎದಾರರಿಗೆ ದಿನಾಂಕ:18.04.2009ರಂದು ಜ್ಯಾರಿಯಾಗಿದ್ದು, ಈ ಬಗ್ಗೆ ಅಂಚೆ ಸ್ವೀಕೃತ ಪತ್ರ ಈ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುತ್ತದೆ. ಹಾಗೂ ವಾಹನದ ಮಾಲೀಕರು ಸದ್ರಿ ಕಾರಣ ಕೇಳಿ ನೋಟಿಸಿಗೆ ದಿನಾಂಕ:12.05.2009ರಂದು ನೀಡಿದ ತಮ್ಮ ಸಮಜಾಯಿಷಿ ಉತ್ತರದಲ್ಲಿ ಪ್ರಕರಣಕ್ಕೂ ತನ್ನ ವಾಹನಕ್ಕೂ ಯಾವುದೇ ಸಂಬಂಧವಿಲ್ಲವೆಂದು ತಿಳಿಸಿ ವಾಹನವನ್ನು ಮದ್ಯಂತರ ಬಿಡುಗಡೆಗೊಳಿಸುವಂತೆ ಕೋರಿರುತ್ತಾರೆ. ಹಾಗೂ ಹೆಚ್.ಪಿ. ದಾರರು ದಿನಾಂಕ:28.04.2009ರಂದು ನೀಡಿದ ಉತ್ತರದಲ್ಲಿ ವಾಹನದ ಮಾಲೀಕರಾದ ಜಯಕರ ಶೆಟ್ಟಿ ಹಾಗೂ ತಮ್ಮ ಕಂಪೆನಿಯ ನಡುವೆ ಸದ್ರಿ ವಾಹನದ ಬಗ್ಗೆ ರೂ.1,20,000/– ಮೊತ್ತಕ್ಕೆ ಸಾಲಪಾವತಿ ವಹಿವಾಟು ಒಪ್ಪಂದ ಮಾಡಿಕೊಳ್ಳಲಾಗಿದ್ದು ಸದ್ರಿಯವರಿಂದ ರೂ.70,000/– ಪಾವತಿಗೆ ಬಾಕಿ ಉಳಿದಿದ್ದು, ಸದ್ರಿ ವಾಹನದ ಮಧ್ಯಂತರ ಬಿಡುಗಡೆ ಪಡೆಯಲು ಅರ್ಹರಾಗಿದ್ದು, ವಾಹನದ ಮದ್ಯಂತರ ಬಿಡುಗಡೆಗೆ ಅನುವು ಮಾಡಿ ಕೊಡಬೇಕಾಗಿ ಕೋರಿರುತ್ತಾರೆ.

ವಾಹನದ ಮಾಲೀಕರು ಮದ್ಯಂತರ ಬಿಡುಗಡೆಗಾಗಿ ಸಲ್ಲಿಸಿದ್ದ ಅರ್ಜಿಯ ಬಗ್ಗೆ ತನಿಖಾಧಿಕಾರಿಗಳು ಸಲ್ಲಿಸಿದ್ದ ಸ್ಪಷ್ಟ ಆಕ್ಷೇಪಣೆಗಳನ್ನು ಪರಿಶೀಲಿಸಿ ಹಾಗೂ ವಾಹನದ ನೊಂದಣಿ ಮಾಲೀಕರೇ ಪ್ರಕರಣದಲ್ಲಿ ಒಂದನೇ ಆರೋಪಿಯಾಗಿ ಗುರುತಿಸಲ್ಪಟ್ಟಿರುವುದರಿಂದ ಹಾಗೂ ವಾಹನವನ್ನು ಮಾನವ ಜೀವಕ್ಕ ಹಾನಿಯಾಗುವಂತಹ ಕಳ್ಳಭಟ್ಟಿ ಸಾರಾಯಿಯನ್ನು ಸಾಗಾಟಕ್ಕೆ ಬಳಸಿಕೊಂಡಿರುವುದರಿಂದ ಇದು ಘೋರ ಅಪರಾಧವಾಗಿದ್ದು, ವಾಹನವನ್ನು ಮದ್ಯಂತರ ಬಿಡುಗಡೆಗೊಳಿಸಿದ್ದಲ್ಲಿ ಮತ್ತೆ ಇಂತಹ ಅಕ್ರಮ ದಂಧೆಗೆ ಸದ್ರಿ ವಾಹನವನ್ನು ಬಳಸಿಕೊಳ್ಳುವ ಸಾಧ್ಯತೆಯಿರುವುದರಿಂದ ವಾಹನದ ಮದ್ಯಂತರ ಬಿಡುಗಡೆ ಪ್ರಕ್ರಿಯೆಯನ್ನು ಕೈಬಿಟ್ಟು ಮುಟ್ಟುಗೋಲು ನಡವಳಿಯನ್ನು ನಡೆಸುವುದು ಅವಶ್ಯಕವೆಂದು ಪ್ರಾಧಿಕಾರವು ಮನಗಂಡಿರುತ್ತದೆ.

ಪ್ರಕರಣದಲ್ಲಿ ಜಪ್ತಾದ ಕಳ್ಳಭಟ್ಟಿ ಸಾರಾಯಿಯ ಮಾದರಿಗಳನ್ನು ಪ್ರಕರಣದ ತನಿಖಾಧಿಕಾರಿಗಳು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ ವಿಶ್ಲೇಷಣಾ ವರದಿಯ ಪ್ರತಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಸದ್ರಿ ರಾಸಾಯನಿಕ ಪರೀಕ್ಷಾ ಫಲಿತಾಂಶದ ವರದಿಯಲ್ಲಿ ವಶಪಡಿಸಿಕೊಂಡ ಕಳ್ಳಭಟ್ಟಿ ಸಾರಾಯಿಯಲ್ಲಿ ಮದ್ಯಸಾರದ ಪ್ರಮಾಣ 26.0% ಇರುವುದಾಗಿ ದೃಢೀಕರಣ ನೀಡಿರುತ್ತಾರೆ. ಸದ್ರಿ ಕಳ್ಳಭಟ್ಟಿ ಸಾರಾಯಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಅಬಕಾರಿ ಉಪ ನಿರೀಕ್ಷಕರು(1), ಮಂಗಳೂರು ಉತ್ತರ ವಲಯ–I ಇವರು ದಿನಾಂಕ:16.05.2009ರಂದು ಶಿಫಾರಸ್ಸು ಮಾಡಿ ವರದಿ ಸಲ್ಲಿಸಿರುತ್ತಾರೆ. ಆ ಪ್ರಕಾರ ಪ್ರಕರಣದಲ್ಲಿ ಜಪ್ತಾದ ಸೊತ್ತುಗಳ ಪೈಕಿ ವಾಹನವನ್ನು ಹೊರುತುಪಡಿಸಿ, ಉಳಿದ 280.000 ಲೀಟರು ಕಳ್ಳಭಟ್ಟಿ ಸಾರಾಯಿ (ಮಾದರಿಗಳನ್ನು ಹೊರತು ಪಡಿಸಿ)ಯನ್ನು ಪ್ರಾಧಿಕಾರದ ದಿನಾಂಕ:25.05.2009ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶಿಸಲಾಗಿರುತ್ತದೆ.

ಮೇಲಿನ ವಿದ್ಯಾಮಾನಗಳನ್ನು ಅವಲೋಕಿಸಿ ವಾಹನದ ಮುಟ್ಟುಗೋಲು ಪ್ರಕ್ರಿಯೆಯನ್ನು ಅತೀ ಶೀಘ್ರದಲ್ಲಿ ನಡೆಸುವರೇ ನಡವಳಿ ವಿಚಾರಣೆಯನ್ನು ಪ್ರಾರಂಬಿಸಿ ಸರ್ಕಾರದ ಪರ ಸಾಕ್ಷಿಧಾರರನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿಗಳ ಹೇಳಿಕೆಯನ್ನು ಹಾಗೂ ಪ್ರತಿರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುತ್ತದೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

**1) ಮೊದಲನೇ ವಿವಾದಾಂಶ:** ದಿನಾಂಕ:25.01.2009ರಂದು ಬಜಾಜ್ ನಿರ್ಮಿತ ತ್ರೀ ವೀಲ್ಹರ್ ಗೂಡ್ಸ್ ಟೆಂಪೋ ನೊಂದಣಿ ಸಂಖ್ಯೆ: KA-19-B-6315 ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

**2) ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತೆ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ಆರೋಪಿ ಮತ್ತು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

**3) ಮೂರನೇ ವಿವಾದಾಂಶ:** ಜಪ್ತುಪಡಿಸಲಾದ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣತ್ಮಾಕವಾಗಿ, ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:**

ಪ್ರಾಸಿಕ್ಯೂಶನ್ ಪರ ಪ್ರಕರಣದ ಪಿರ್ಯಾದುದಾರರು ಹಾಗೂ ತನಿಖಾಧಿಕಾರಿಯಾದ ಶ್ರೀ ವಿನೋದ್‌ಕುಮಾರ್, ಅಬಕಾರಿ ಉಪನಿರೀಕ್ಷಕರು, ಮಂಗಳೂರು ಉತ್ತರ ವಲಯ–I ರವರು ದಿನಾಂಕ:08.07.2009ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ. ರವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ಕಳೆದ ನಾಲ್ಕು ವರ್ಷ ಗಳಿಂದ ಅಬಕಾರಿ ಉಪ ನಿರೀಕ್ಷಕನಾಗಿ ಮಂಗಳೂರು ಉತ್ತರ ವಲಯ–1ರಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿನಾಂಕ:25.01.2009 ರಂದು

ಕುಂಜತ್ತಬೈಲು ಗ್ರಾಮದ ಮರಕಡ ಎಂಬಲ್ಲಿ ಕರ್ತವ್ಯ ನಿರತ ವೇಳೆ ಬೆಳಿಗ್ಗೆ ಸುಮಾರು 5–25 ಗಂಟೆ ಸಮಯದಲ್ಲಿ ಮರಕಡ ರಸ್ತೆಯಿಂದ ಕಾವೂರು ಕಡೆ ಗೂಡ್ಸ್ ಟೆಂಪೋ ಬರುತ್ತಿದ್ದದನ್ನು ತಡೆದು ನಿಲ್ಲಿಸಿದಾಗ ಆ ಟೆಂಪೊ ತುಂಬಾ ದೂರ ಹೋಗಿ ನಿಂತಿತು. ನಾವು ಸದ್ರಿ ವಾಹನವನ್ನು ಹಿಂಬಾಲಿಸಿ ನಿಲ್ಲಿಸಿದಾಗ ಅದರಲ್ಲಿದ್ದ ಚಾಲಕ ಹಾಗೂ ಇನ್ನೊಬ್ಬ ವ್ಯಕ್ತಿ ಓಡಲು ಯತ್ನಿಸಿದಾಗ ಅವರನ್ನು ನಾವು ಹಿಡಿಯಲು ಪ್ರಯತ್ನಿಸಿದಾಗ ಓರ್ವ ವ್ಯಕ್ತಿಯು ಸಿಕ್ಕಿದ್ದು, ಸದ್ರಿ ವ್ಯಕ್ತಿಯನ್ನು ವಾಹನದ ಪಕ್ಕ ಕರೆದುಕೊಂಡು ಬಂದು ಆ ವಾಹನದಲ್ಲಿ ಏನಿದೆ ಎಂದು ಕೇಳಿದಾಗ ಆತನು ಅನುಮಾನಾಸ್ಪದ ರೀತಿಯಲ್ಲಿ ವರ್ತಿಸಿ, ಅದರಲ್ಲಿ ಕಳ್ಳಭಟ್ಟಿ ಸಾರಾಯಿ ಇದೆ ಎಂದು ತಿಳಿಸಿದ. ನಂತರ ಪಂಚರನ್ನಾಗಿ ಮಾಡಲು ಪಕ್ಕದಲ್ಲಿ ಯಾರೂ ಇಲ್ಲದ ಕಾರಣ ಸಿಬ್ಬಂದಿಗಳ ಸಮಕ್ಷಮದಲ್ಲಿ, ನ್ಯಾಯಾಲಯದಿಂದ ವಾರೆಂಟನ್ನು ಪಡೆಯಲು ಸಮಯಾವಕಾಶ ಇಲ್ಲದ ಕಾರಣ ಸ್ಥಳದಲ್ಲಿಯೇ ಸರ್ಚ್ ಮೆಮೊವನ್ನು ತಯಾರಿಸಿ, ವಾಹನವನ್ನು ಪರಿಶೀಲಿಸಲಾಗಿ ವಾಹನದ ಹಿಂಬದಿಯಲ್ಲಿ 35 ಲೀಟರ್ ನ 8 ಕ್ಯಾನುಗಳಲ್ಲಿ ಕಳ್ಳಭಟ್ಟಿ ಸಾರಾಯಿ ಇರುವುದು ಕಂಡು ಬಂತು. ಸದ್ರಿ ವ್ಯಕ್ತಿಯಲ್ಲಿ ಓಡಿ ಹೋದ ವ್ಯಕ್ತಿಯ ಹೆಸರು ಕೇಳಿದಾಗ ಆತನು ಅರುಣ್ ಡಿಸೋಜಾ ಎಂದು ತಿಳಿಸಿದನು. ನಂತರ ಸದ್ರಿ ವ್ಯಕ್ತಿಯ ಹೆಸರನ್ನು ಕೇಳಲಾಗಿ ತನ್ನ ಹೆಸರು ಜಯಕರ ಶೆಟ್ಟಿ ಬಿನ್ ರಾಮಣ್ಣ ಶೆಟ್ಟಿ ,ಜ್ಯೋತಿ ನಗರ ಎಂದು ತಿಳಿಸಿದನು. ಸದ್ರಿ ವಾಹನದ ನೊಂದಣಿ ಸಂಖ್ಯೆ: KA19-B-6315 ಆಗಿದ್ದು, ಸದ್ರಿ ವಾಹನದಲ್ಲಿದ್ದ 8 ಕ್ಯಾನುಗಳಲ್ಲಿದ್ದ ಪ್ರತಿಯೊಂದು ಕ್ಯಾನಿನಿಂದ 750 ಎಂ.ಎಲ್ ನಂತೆ 8 ಬಾಟಲಿಗಳಲ್ಲಿ ಮಾದರಿ ತೆಗೆಯಲಾಯಿತು. ಸದ್ರಿ 8 ಬಾಟಲಿಗಳಿಗೆ ಬಟ್ಟೆ ದಾರವನ್ನು ಕಟ್ಟಿ, ಇಲಾಖಾ ಸೀಲಿನಿಂದ ಸೀಲು ಮಾಡಿ, ಆರೋಪಿಗಳ ಹೆಸರಿರುವ ಗುರುತು ಚೀಟಿ ಅಂಟಿಸಿ, ಮಾದರಿ ಸೀಲನ್ನು ಸ್ಥಳದಲ್ಲೇ ತಯಾರಿಸಲಾಯಿತು. ಚೆಕ್ ಬಂದಿಯನ್ನು ನಮೂದಿಸಲಾಗಿ ದಕ್ಷಿಣಕ್ಕೆ ಕಾವೂರಿಗೆ ಹೋಗುವ ರಸ್ತೆ, ಪಶ್ಚಿಮಕ್ಕೆ ಕುಂಜತ್ತ ಬೈಲಿಗೆ ಹೋಗುವ ರಸ್ತೆಯಿದ್ದು, ಪೂರ್ವಕ್ಕೆ ಕಾಡು ಮತ್ತು ಉತ್ತರಕ್ಕೆ ಮರಕಡಕ್ಕೆ ಹೋಗುವ ರಸ್ತೆ ಇರುತ್ತದೆ. ನಂತರ ಸದ್ರಿ ವ್ಯಕ್ತಿಯನ್ನು ದಸ್ತಗಿರಿ ಮಾಡಿ ಹಾಗೂ ಸದ್ರಿ ಗೂಡ್ಸ್ ಟೆಂಪೊದಲ್ಲಿರುವ ಕಳ್ಳಭಟ್ಟಿ ಸಾರಾಯಿ ಹಾಗೂ ಗೂಡ್ಸ್ ಟೆಂಪೊವನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಕಚೇರಿಗೆ ತರಲಾಯಿತು. ನಂತರ ಕಚೇರಿಯಲ್ಲಿ ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ, ಆರೋಪಿ ಸಮೇತ ನ್ಯಾಯಾಲಯಕ್ಕೆ ಹಸ್ತಾಂತರಿಸಲಾಯಿತು. ಮುಂದಿನ ತನಿಖೆ ನಡೆಸಲಾಗಿ, ಸದರಿ ತಕ್ಷೀರಿನಲ್ಲಿ ವಶಪಡಿಸಿಕೊಂಡ ಕಳ್ಳಭಟ್ಟಿ ಸಾರಾಯಿಯಿಂದ ತೆಗೆದ 750 ಎಂ.ಎಲ್‌ನ 8 ಬಾಟಲಿಗಳನ್ನು ರಾಸಾಯನಿಕ ವಿಶ್ಲೇಷಣೆಗೆ ದಿನಾಂಕ:18.02.2009 ರಂದು ಶ್ರೀ ಎಂ. ಉಮೇಶ್, ಅಬಕಾರಿ ರಕ್ಷಕ ಎಂಬವರಲ್ಲಿ ಕಳುಹಿಸಿಕೊಡಲಾಯಿತು. ರಾಸಾಯನಿಕ ವಿಶ್ಲೇಷಣಾ ವರದಿಯನ್ನು ದಿನಾಂಕ:07.03.2009 ರಂದು ಪಡೆಯಲಾಗಿರುತ್ತದೆ. ಈ ಪ್ರಕರಣದಲ್ಲಿ ತಯಾರಿಸಿದ ಮಹಜರನ್ನು ನಿಶಾನೆ ಪಿ–1 ಎಂದು,ಅದರ ಮೇಲಿನ ಸಹಿಯನ್ನು ನಿಶಾನೆ ಪಿ–1 ಎ ಎಂದು ಹಾಗೂ ಪ್ರಥಮ ಮಾಹಿತಿ ವರದಿಯನ್ನು ನಿಶಾನೆ ಪಿ–2 ಎಂದು,ಸಾಕ್ಷಿಯ ಸಹಿಯನ್ನು ನಿಶಾನೆ ಪಿ–2 ಎ ಎಂದು ಗುರುತಿಸ ಲಾಯಿತು. ರಾಸಾಯನಿಕ ತಜ್ಞರ ವರದಿಯನ್ನು ನಿಶಾನೆ ಪಿ–3 ಎಂದು ,ಬಿ.ಎಕ್ಸ್‌ಟ್ರಾಕ್ಟ್ ವರದಿಯನ್ನು ನಿಶಾನೆ ಪಿ–4 ಎಂದು ಗುರುತಿಸಲಾಯಿತು. ಈ ನ್ಯಾಯಾಲಯದ ಮುಂದೆ ಮುಟ್ಟುಗೋಲು ಕ್ರಮದ ವರದಿಯನ್ನು ನಿಶಾನೆ ಪಿ–5 ಎಂದು ಸಾಕ್ಷಿಯ ಸಹಿಯನ್ನು ನಿಶಾನೆ ಪಿ–5 ಎ ಎಂದು ಗುರುತಿಸಲಾಯಿತು. ವಾಹನವನ್ನು ನಾನು ನೋಡಿದಲ್ಲಿ ಗುರುತಿಸುತ್ತೇನೆ. ವಾಹನವನ್ನು ಮುದ್ದೆ ಮಾಲು–1 ಎಂದು ಗುರುತಿಸಲಾಯಿತು.

**ಅಭಿಯೋಗದ ಪರ ಸಾಕ್ಷಿದಾರರನ್ನು ರಕ್ಷಣಾ ಪರ ವಕೀಲರಾದ ಶ್ರೀ ಕಾರ್ತಿಕ್ ಆರ್.ಉಡುಪ ಇವರು ಪಾಟೀ ಸವಾಲು ನಡೆಸಲಾಗಿ ಸಾಕ್ಷಿದಾರರು ಪಾಟೀ ಸವಾಲಿಗೆ ಉತ್ತರಿಸುತ್ತಾ :** ಆ ದಿವಸ ರಾತ್ರಿ 9–30 ಗಂಟೆಗೆ ಕಚೇರಿಯಿಂದ ಹೊರಟಿರುತ್ತೇನೆ. ಮರಕಡ ಜಂಕ್ಷನ್ ಕಚೇರಿಯಿಂದ ಸುಮಾರು 3 ಕಿ.ಮೀ ದೂರವಿರುತ್ತದೆ. ಇದೇ ಸ್ಥಳ ಕಾವೂರು ಜಂಕ್ಷನ್‌ಗೆ ಸಾಧಾರಣ ಮುಕ್ಕಾಲು ಕಿ.ಮೀ ದೂರ ವಿರಬಹುದು. ಮರಕಡ ಜಂಕ್ಷನ್‌ನ ಬಳಿ ಬಾರ್ ಹಾಗೂ ಪೆಟ್ರೋಲ್ ಪಂಪ್ ಹಾಗೂ ಇತರೆ ವಾಣಿಜ್ಯ ಸಂಸ್ಥೆಗಳಿರುತ್ತವೆ. ಮಂಗಳೂರಿನಿಂದ ಬಜ್ಪೆ ವಿಮಾನ ನಿಲ್ದಾಣಕ್ಕೂ ಮತ್ತು ಕಟೀಲು ದುರ್ಗಾಪರಮೇಶ್ವರಿ ದೇವಸ್ಥಾನದ ದಾರಿ ಹಾದು ಹೋಗುತ್ತದೆ. ಸದ್ರಿ ರಸ್ತೆಯಲ್ಲಿ ಭಾರೀ ವಾಹನ ಸಂಚಾರವಿರುತ್ತದೆ. ನಾವು ಮರಕಡ ಜಂಕ್ಷನ್‌ನಲ್ಲಿ ಸಾಧಾರಣ ಮುಕ್ಕಾಲು ಗಂಟೆಯಿಂದ ಒಂದು ಗಂಟೆಯವರೆಗೆ ಇದ್ದೆವು. ಸದ್ರಿ ಮರಕಡ ಜಂಕ್ಷನ್‌ಗೆ ಬೆಳಗ್ಗಿನ ಜಾವ 5–30 ಗಂಟೆಗೆ ತಲುಪಿರುತ್ತೇವೆ. ಸದರಿ ಸ್ಥಳಕ್ಕೆ ಮುಟ್ಟಿದಾಗ ಸುಮಾರು 4–5 ವಾಹನಗಳನ್ನು ತಪಾಸಣೆ ಮಾಡಿರುತ್ತೇನೆ. ಕಾವೂರು ಜಂಕ್ಷನ್‌ನಲ್ಲಿ 2 ವಾಹನ ಮತ್ತು ಅದರಿಂದ ಹಿಂದಿನ ಅರ್ಧ ಕಿ.ಮೀ ದೂರದಲ್ಲಿ 3 ವಾಹನಗಳನ್ನು ತಪಾಸಣೆ ಮಾಡಿರುತ್ತೇನೆ. ಜಪ್ತು ಪಡಿಸಿದ ವಾಹನದ ತಪಾಸಣೆ ಪೂರ್ವದಲ್ಲಿ ಸದ್ರಿ 2 ವಾಹನಗಳನ್ನು ತಪಾಸಣೆ ಮಾಡಿರುತ್ತೇನೆ. ಜಪ್ತು ಪಡಿಸಿದ ವಾಹನ ತಪಾಸಣೆಗೆ ಅರ್ಧ ಗಂಟೆ ಪೂರ್ವದಲ್ಲಿ ಇತರೆ ವಾಹನಗಳನ್ನು ತಪಾಸಣೆ ಮಾಡಿರುತ್ತೇನೆ. ಸ್ಥಳ ಮಹಜರನ್ನು ಇಲಾಖಾ ಅಬಕಾರಿ ರಕ್ಷಕ ಸುರೇಂದ್ರ ಇವರಿಂದ ಬರೆಸಲಾಗಿರುತ್ತದೆ. ಆ ದಿವಸ ಇತರೆ ವಾಹನಗಳನ್ನು ತಪಾಸಣೆ ಮಾಡಿದ ಬಗ್ಗೆ ದಾಖಲೆ ನನ್ನಲ್ಲಿ ಇರುತ್ತದೆ. ತಪಾಸಣೆ ಮಾಡಲಾದ ಜಪ್ತು ಮಾಡಿರುವ ವಾಹನವನ್ನು ಸುಮಾರು 10. ಮೀಟರ್ ದೂರದಲ್ಲಿ ಕಂಡಿರುತ್ತೇನೆ. ಸದ್ರಿ ಜಪ್ತು ವಾಹನವನ್ನು ನಿಲ್ಲಿಸಲು ನಾವು ಹೋಗುತ್ತಿದ್ದ ಸರ್ಕಾರಿ ವಾಹನದ ಚಾಲಕನು ಸನ್ನೆ ಮಾಡಿರುತ್ತಾನೆ. ಸದ್ರಿ ವಾಹನವನ್ನು ಅಟ್ಟಿಸಿ ಹಿಂಬಾಲಿಸಿರುವುದಿಲ್ಲ. ವಾಹನದಿಂದ ಓಡಿ ಹೋಗಲು ಪ್ರಯತ್ನಿಸಿದ ವ್ಯಕ್ತಿಯನ್ನು 50 ಮೀಟರ್ ವರೆಗೆ ಓಡಿ ಹಿಡಿದಿರುತ್ತೇನೆ . ವಾಹನದಿಂದ ಇಬ್ಬರು ವ್ಯಕ್ತಿಗಳು ಜಿಗಿದು ಓಡಿ ಹೋಗಿದ್ದು ಓರ್ವ ವ್ಯಕ್ತಿಯು ಕುಂಜತ್ತಬೈಲ್ ಕಡೆಗೆ ಓಡಿ ಹೋಗಿರುತ್ತಾನೆ. ವಾಹನ ಜಪ್ತು ಸಂದರ್ಭದಲ್ಲಿ ತಯಾರಿಸಿದ ಮಹಜರಿಗೆ ಆ ಪರಿಸರದಲ್ಲಿ ತಿರುಗಾಡುತ್ತಿದ್ದ ಜನರ

ಸಹಿ ಪಡೆಯಲು ಪ್ರಯತ್ನಿಸಿರುತ್ತೇನೆ. ಈ ಸಂದರ್ಭ ಸುಮಾರು 2–3 ವಾಹನಗಳನ್ನು ನಿಲ್ಲಿಸಿ, ಮಹಜರಿಗೆ ಸಾಕ್ಷಿಗಳನ್ನಾಗಿ ಬರಲು ಹೇಳಿರುತ್ತೇನೆ. ಆದರೆ ಆ ವಾಹನಗಳ ನೊಂದಣಿ ಸಂಖ್ಯೆ ಅಥವಾ ವ್ಯಕ್ತಿಗಳ ಮಾಹಿತಿ ಪಡೆದಿರುವುದಿಲ್ಲ. ವಾಹನ ಮಾಲೀಕರು ಅಪರಾಧ ಸಂದರ್ಭದಲ್ಲಿ ವಾಹನದಲ್ಲಿ ಇದ್ದಿಲ್ಲ ಎಂದರೆ ಸರಿಯಲ್ಲ. ಜಪ್ತುಪಡಿಸಿರುವ ಕಳ್ಳಭಟ್ಟಿ ಸೊತ್ತುಗಳಿಗೂ ಆರ್.ಸಿ ಮಾಲೀಕರಿಗೂ ಯಾವುದೇ ಸಂಬಂಧ ಇಲ್ಲ ಎಂದರೆ ಸರಿಯಲ್ಲ. ಆರ್.ಸಿ. ಮಾಲೀಕರಲ್ಲಿ ವಶಪಡಿಸಿಕೊಂಡಿರುವ ಕಳ್ಳಭಟ್ಟಿ ಸಾರಾಯಿ ಯಾರಿಗೆ ಸೇರಿದ್ದು ಎಂಬ ಬಗ್ಗೆ ಕೇಳಲಾಗಿ ಅವರು ಸದ್ರಿ ಸೊತ್ತು ಅರುಣ್ ಡಿಸೋಜಾ ಎಂಬವರಿಗೆ ಸೇರಿದ್ದು ಎಂದು ತಿಳಿಸಿರುತ್ತಾರೆ. ಸದ್ರಿ ಅಕ್ರಮ ಸಾರಾಯಿಯನ್ನು ಮರಕಡ ಸೇತುವೆಯಿಂದ ಕುಂಜತ್ತಬೈಲ್ ಕಡೆಗೆ ಸಾಗಿಸಲು ಉದ್ದೇಶಿಸಿರುವುದಾಗಿ ತಿಳಿಸಿರುತ್ತಾರೆ. ಆರ್.ಸಿ. ಮಾಲೀಕರ ಮನೆಗೂ ಮರಕಡ ಜಂಕ್ಷನಿಗೂ ಇರುವ ದೂರ ನನಗೆ ತಿಳಿದಿರುವುದಿಲ್ಲ. ಆರ್.ಸಿ. ಮಾಲೀಕರಿಗೆ ಫೋನ್ ಮೂಲಕ ಕರೆ ಮಾಡಿ ಬರಲು ತಿಳಿಸಿದ್ದೆ ಎಂದರೆ ಸರಿಯಲ್ಲ. ನನಗೆ ಮತ್ತು ಆರ್.ಸಿ ಮಾಲೀಕರ ಮಧ್ಯೆ ಮಾತಿನ ಚಕಮಕಿಯಿಂದಾಗಿ ಅವರ ವಿರುದ್ಧ ಈ ಕೇಸು ಮಾಡಲಾಗಿದೆ ಎಂದರೆ ಸರಿಯಲ್ಲ ಎಂದು ಸಾಕ್ಷಿದಾರರು ರಕ್ಷಣಾ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

**ರಕ್ಷಣಾ ಸಾಕ್ಷಿ ವಿಚಾರಣೆ:**

ಪ್ರಕರಣದಲ್ಲಿ ಜಪ್ತಾದ ವಾಹನದ ಆರ್.ಸಿ ಮಾಲೀಕರಾದ ಶ್ರೀ.ಜಯಕರ ಶೆಟ್ಟಿ ಇವರು ದಿನಾಂಕ:15.07.2009ರಂದು ತಮ್ಮ ರಕ್ಷಣಾ ಸಾಕ್ಷಿಯನ್ನು ನೀಡುತ್ತಾ ಈ ಪ್ರಕರಣದಲ್ಲಿ ವಾಹನದ ಮದ್ಯಂತರ ಬಿಡುಗಡೆ ಕೋರಿ ಅರ್ಜಿ ಸಲ್ಲಿಸಿರುತ್ತೇನೆ, ವಾಹನವು ಬಜಾಜ್ ತ್ರೀ ವೀಲ್ಹರ್ ಗೂಡ್ಸ್ ಟೆಂಪೋ ಆಗಿದ್ದು ಇದರ ನೊಂದಣಿ ಸಂ:KA-19-B-6315 ಆಗಿರುತ್ತದೆ. ಇದನ್ನು ಜಾನ್ ಡಿಸೋಜಾ ಎಂಬವರು ಚಾಲನೆ ಮಾಡುತ್ತಿದ್ದು ಸದರಿಯವರಿಗೆ ದಿನಕ್ಕೆ ರೂ.300ರಂತೆ ಬಾಡಿಗೆಗೆ ನೀಡಿರುತ್ತೇನೆ. ದಿನಾಂಕ:24.01.2009 ರಂದು ಸಂಜೆ 7–00 ಗಂಟೆಗೆ ಟೆಂಪೋ ಮನೆಗೆ ಬಂದಿರಲಿಲ್ಲ. ಈ ವಿಷಯದ ಬಗ್ಗೆ ಜಾನ್ ಡಿಸೋಜನಿಗೆ ನಾನು ಫೋನು ಮಾಡಿ ವಿಚಾರಿಸಿದಾಗ ಬೆಳಿಗ್ಗೆ 7–00 ಘಂಟೆಗೆ ಒಂದು ಬಾಡಿಗೆ ಇದೆ ಅದನ್ನು ಮುಗಿಸಿ ಮನೆಗೆ ಬರುತ್ತೇನೆ ಎಂದು ಹೇಳಿದ್ದರು. ಆದರೆ ದಿನಾಂಕ:25.01.2009 ರಂದು ಬೆಳಿಗ್ಗೆ 6–00 ಗಂಟೆಗೆ ನನಗೆ ಅಬಕಾರಿ ಇಲಾಖೆಯವರಿಂದ ಕುಂಜತ್ತಬೈಲಿಗೆ ಕೂಡಲೇ ಬರಬೇಕೆಂದು ಕರೆ ಬಂತು. ನಾನು ಕೂಡಲೇ ಆ ಸ್ಥಳಕ್ಕೆ ಹೋಗಿರುತ್ತೇನೆ. ಕುಂಜತ್ತಬೈಲಿಗೆ ತಲುಪುವಾಗ ಸಮಯ 7–25 ಘಂಟೆ ಆಗಿತ್ತು. ಆ ಸಮಯದಲ್ಲಿ ನನ್ನ ಗಾಡಿಯನ್ನು ಜಪ್ತು ಮಾಡಿರುತ್ತೇವೆ ಎಂದು ಹೇಳಿದರು. ನಾನು ಕಾರಣ ಕೇಳಿದೆ. ಅದಕ್ಕೆ ಸದರಿ ವಾಹನದಲ್ಲಿ ಸಾರಾಯಿ ತೊಟ್ಟೆಗಳನ್ನು ಕೊಂಡು ಹೋಗುತ್ತಿದ್ದರು ಎಂದು ಹೇಳಿ ಅದಕ್ಕಾಗಿ ವಾಹನವನ್ನು ಜಪ್ತು ಮಾಡಿದ್ದೇವೆ ಎಂದು ಹೇಳಿದರು. ನಾನು ಅವರಲ್ಲಿ ತುಂಬಾ ವಿನಂತಿಯಿಂದ ಗಾಡಿಯನ್ನು ಜಪ್ತು ಮಾಡಬೇಡಿ ಎಂದು ಬೇಡಿಕೊಂಡೆನು. ಅದಕ್ಕೆ ಅವರು ಒಪ್ಪಲಿಲ್ಲ. ಆಗ ನನಗೂ ಅವರಿಗೂ ಮಾತಿನ ಚಕಮಕಿ ನಡೆಯಿತು. ಆಗ ಅವರು ನನಗೆ ನಿನ್ನನ್ನು ಸುಲಭದಲ್ಲಿ ಬಿಡುವುದಿಲ್ಲ. ನಿನಗೆ ಒಂದು ಗತಿ ಕಾಣಿಸುತ್ತೇನೆ ಎಂದು ಹೇಳಿ ನನ್ನನ್ನು ಟೆಂಪೊ ಸಮೇತ ಬಂಧಿಸಿದರು. ನಾನು ಆ ಟೆಂಪೊ ನೋಡಿದಾಗ ಟೆಂಪೊದಲ್ಲಿ ಸಾರಾಯಿ ಇರಲಿಲ್ಲ. ಇಲ್ಲಿಯವರೆಗೆ ನನ್ನ ಮೇಲೆ ಯಾವುದೇ ಅಬಕಾರಿ ಪ್ರಕರಣ ದಾಖಲಾಗಿರುವುದಿಲ್ಲ. ನನ್ನ ಗಾಡಿ ಈ ಹಿಂದೆ ಎಂದೂ ಅಬಕಾರಿ ಪ್ರಕರಣಗಳಲ್ಲಿ ಜಪ್ತಾಗಿರುವುದಿಲ್ಲ. ನಾನು ನನ್ನ ಟೆಂಪೊವನ್ನು ಗೂಡ್ಸ್ ಬಾಡಿಗೆಗಾಗಿ ಉಪಯೋಗಿಸುತ್ತಿದ್ದೆ. ನನ್ನ ಮೇಲಿನ ಮೊಕದ್ದಮೆಯನ್ನು ರದ್ದುಗೊಳಿಸಿ ನನ್ನ ವಾಹನವನ್ನು ನನಗೆ ಬಿಡುಗಡೆಗೊಳಿಸಿ ಕೊಡಬೇಕೆಂದು ಮಾನ್ಯ ನ್ಯಾಯಾಲಯದಲ್ಲಿ ಬೇಡಿಕೊಳ್ಳುತ್ತೇನೆ.

ರಕ್ಷಣಾ ಸಾಕ್ಷಿದಾರರನ್ನು ಸರ್ಕಾರಿ ಅಭಿಯೋಜಕರು ಪಾಟೀ ಸವಾಲು ನಡೆಸಲಾಗಿ ರಕ್ಷಣಾ ಸಾಕ್ಷಿದಾರರು ಸಾಕ್ಷಿ ನುಡಿಯುತ್ತಾ ಜಾನ್ ಡಿಸೋಜ ರನ್ನು ನಾನು ಟೆಂಪೊ ಡ್ರೈವರಾಗಿ ನೇಮಿಸಿದ ಬಗ್ಗೆ ಯಾವುದೇ ದಾಖಲೆಗಳಿಲ್ಲ. ನಮ್ಮ ಟೆಂಪೊ ಡ್ರೈವರ್ ಜಾನ್ ಡಿಸೋಜಾ ಈಗಲೂ ಇರುತ್ತಾರೆ. 2006 ನವೆಂಬರಿನಲ್ಲಿ ನಾನು ಟೆಂಪೊವನ್ನು ಖರೀದಿಸಿರುತ್ತೇನೆ. ನಾನು ಕೆಂಪು ಕಲ್ಲು ಮತ್ತು ಹ್ಯೊಗೆಯನ್ನು ಕಮೀಷನ್ ಮೇಲೆ ಮಾರಾಟ ಮಾಡುತ್ತೇನೆ. ಸದರಿ ವ್ಯಾಪಾರದಿಂದ ನನಗೆ ತಿಂಗಳಿಗೆ ರೂ. 2,000/– ಸರಾಸರಿ ಆದಾಯ ಬರುತ್ತದೆ. ನನಗೆ ಟೆಂಪೊದಿಂದ ಪ್ರತಿ ದಿನ ರೂ. 300/– ಜಾನ್ ಡಿಸೋಜಾ ಕೊಡುತ್ತಿದ್ದ. ನಮ್ಮ ಮನೆಯಲ್ಲಿ ನಾನು ನನ್ನ ಹೆಂಡತಿ ಮತ್ತು ನನ್ನ ಎರಡು ಮಕ್ಕಳು ಇರುತ್ತೇವೆ. ನನಗೆ ಯಾವುದೇ ಕೃಷಿ ಭೂಮಿ ಇರುವುದಿಲ್ಲ. ನನ್ನ ಮಕ್ಕಳು 6ನೇ ಮತ್ತು 4ನೇ ತರಗತಿಗಳಲ್ಲಿ ಕಲಿಯುತ್ತಿದ್ದಾರೆ. ನಾನು ಮಹೀಂದ್ರ ಫೈನಾನ್ಸಿನಿಂದ ಲೋನ್ ತೆಗೆದಿದ್ದು, ಪ್ರತಿ ತಿಂಗಳು ರೂ. 4,157/– ಕಂತು ಕಟ್ಟುತ್ತಿದ್ದೇನೆ. ಹ್ಯೊಗೆ ವ್ಯಾಪಾರ ಮತ್ತು ಟೆಂಪೊ ಬಾಡಿಗೆಯಿಂದ ಬರುವ ಆದಾಯ ನನ್ನ ಖರ್ಚಿಗೆ ಸಾಕಾಗುತ್ತಿತ್ತು ಎಂದರೆ ಸರಿ. ಜಾನ್ ಡಿಸೋಜಾನನ್ನು ನನ್ನ ಟೆಂಪೊಗೆ ಚಾಲಕನನ್ನಾಗಿ ನೇಮಿಸಿರುವುದಿಲ್ಲ ಎಂದರೆ ಸರಿಯಲ್ಲ. ನನ್ನ ಜೀವನಕ್ಕೆ ನನ್ನ ಗಳಿಕೆ ಸಾಲದೇ ಇರುವುದರಿಂದ ನಾನು ಅಕ್ರಮ ಸಾರಾಯಿ ಸಾಗಾಟದಲ್ಲಿ ತೊಡಗಿರುತ್ತೇನೆ ಎಂದರೆ ಸರಿಯಲ್ಲ ಎಂದು ಸರ್ಕಾರಿ ಅಭಿಯೋಜಕರ ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

ಪ್ರಾಧಿಕಾರದಲ್ಲಿ ಲಭ್ಯವಾಗಿರುವ ದಾಖಲಾತಿಗಳ ಪ್ರಕಾರ ದಿನಾಂಕ:25.01.2009 ರಂದು ತ್ರಿವೀಲ್ಹರ್ ವಾಹನ ನೊಂದಣಿ ಸಂ:KA-19-B-6315 ಗೂಡ್ಸ್ ಟೆಂಪೋ ಇದರಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿಯನ್ನು ಸಾಗಾಟ ಮಾಡುತ್ತಿದ್ದುದನ್ನು ಅಬಕಾರಿ ಉಪ ನಿರೀಕ್ಷಕರು(1), ಮಂಗಳೂರು ಉತ್ತರ ವಲಯ–I ರವರು ಪತ್ತೆಹಚ್ಚಿ, ಪ್ರ.ಮಾ.ವ ಸಂ:28/ 08–09, ದಿನಾಂಕ:25.01.2009ರ ಪ್ರಕಾರ ಪ್ರಕರಣ ದಾಖಲಿಸಿಕೊಂಡು, ಅಕ್ರಮ ಕಳ್ಳಭಟ್ಟಿ ಸಾಗಾಣಿಕೆಗೆ ಬಳಸಲಾದ ತ್ರಿಚಕ್ರ ವಾಹನ ಮತ್ತು ಕಳ್ಳಭಟ್ಟಿ ಸಾರಾಯಿಯನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿದ್ದು ಹಾಗೂ ವಾಹನದಲ್ಲಿ

ಜಪ್ತು ಮಾಡಲ್ಪಟ್ಟಿರುವ ಮಾದರಿಗಳು ರಾಸಾಯನಿಕ ತಜ್ಞರ ವರದಿಯಂತೆ ಕಳ್ಳಭಟ್ಟಿಯೆಂದು ದೃಢಪಟ್ಟಿರುವುದರಿಂದ, ಕರ್ನಾಟಕ ಅಬಕಾರಿ ಕಾಯಿದೆ ಕಲಂ 11,13,14 ರ ಪ್ರಕಾರ ಅಪರಾಧ ಹಾಗೂ 32,34 ಮತ್ತು 38(ಎ) ರ ಪ್ರಕಾರ ಶಿಕ್ಷಾರ್ಹ ಅಪರಾಧ ಎಸಗಿರುವುದರಿಂದ ಹಾಗೂ ವಾಹನದ ಮಾಲೀಕರೇ ಪ್ರಕರಣದ ಮುಖ್ಯ ಅರೋಪಿತ ವ್ಯಕ್ತಿಯಾಗಿರುವುದರಿಂದ ಮತ್ತು ಅವರನ್ನು ಅಪರಾಧ ಸ್ಥಳದಲ್ಲಿಯೇ ದಸ್ತಗಿರಿ ಮಾಡಲಾಗಿರುವುದರಿಂದ ವಾಹನದ ಮಾಲೀಕರು ತನ್ನ ತಿಳುವಳಿಕೆಯಿಂದಲೇ ವಾಹನವನ್ನು ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದಾಗಿ ಈ ಪ್ರಾಧಿಕಾರವು ಮನಗಂಡು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ಒಂದನೇ ಅಂಶಕ್ಕೆ ಗುಣಾತ್ಮಕವಾಗಿ ತೀರ್ಮಾನ ತೆಗೆದು ಕೊಳ್ಳಬೇಕಾಗಿರುತ್ತದೆ.

ಸದ್ರಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ತ್ರಿವೀಲ್ಲರ್ ವಾಹನ ನೊಂದಣಿ ಸಂ: KA-19-B-6315 ಗೂಡ್ಸ್ ಟೆಂಪೋ ಇದರ ಮಾಲೀಕನೆಂದು ಹೇಳಿಕೊಂಡ ಶ್ರೀ.ಜಯಕರ ಶೆಟ್ಟಿ ಎಂಬವರು ತನ್ನ ವಕೀಲರ ಮೂಲಕ ವಾಹನದ ಮದ್ಯಂತರ ಬಿಡುಗಡೆಗಾಗಿ ಅರ್ಜಿಯನ್ನು ಸಲ್ಲಿಸಿದ್ದು, ಸದ್ರಿ ಅರ್ಜಿಯ ಪರಿಶೀಲನೆ ನಡೆಸಿ ಹಾಗೂ ಸದ್ರಿ ಅರ್ಜಿಯ ಬಗ್ಗೆ ಪ್ರಕರಣದ ತನಿಖಾದಿಕಾರಿಗಳಿಂದ ಅಕ್ಷೇಪಣೆಗಳನ್ನು ಕೇಳಲಾಗಿ, ವಾಹನದ ಮಾಲೀಕರೇ ಪ್ರಕರಣದಲ್ಲಿ ಮುಖ್ಯ ಅರೋಪಿತ ವ್ಯಕ್ತಿಯಾಗಿದ್ದು, ವಾಹನವನ್ನು ಮದ್ಯಂತರ ಬಿಡುಗಡೆ ಮಾಡಿದ್ದಲ್ಲಿ ವಾಹನವನ್ನು ಮತ್ತೆ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಗೆ ಉಪಯೋಗಿಸಿಕೊಳ್ಳುವ ಸಾಧ್ಯತೆಯಿರುವುದೆಂದು ತಮ್ಮ ಸ್ಪಷ್ಟ ಅಭಿಪ್ರಾಯದೊಂದಿಗೆ ಅಕ್ಷೇಪಣೆಗಳನ್ನು ಸಲ್ಲಿಸಿರುವುದರಿಂದ ವಾಹನದ ಮಾಲೀಕರು ಮದ್ಯಂತರ ಬಿಡುಗಡೆಗೆ ಸಲ್ಲಿಸಿದ್ದ ಅರ್ಜಿಯ ವಿಚಾರಣೆಯನ್ನು ತಟಸ್ಥಗೊಳಿಸಿ ವಾಹನದ ಮುಟ್ಟುಗೋಲು ನಡವಳಿಯನ್ನು ಪ್ರಾರಂಭಿಸ ಲಾಗಿರುತ್ತದೆ. ಮುಟ್ಟುಗೋಲು ನಡವಳಿ ವಿಚಾರಣೆ ಸಂದರ್ಭದಲ್ಲಿ ಪಿರ್ಯಾದುದಾರರ ಹೇಳಿಕೆಯನ್ನು ಸವಿಸ್ತರವಾಗಿ ಪರಿಶೀಲಿಸಿ ಹಾಗೂ ರಕ್ಷಣಾ ಪರ ಸಾಕ್ಷ್ಯ ನೀಡಿದ ವಾಹನದ ಮಾಲೀಕರು ತನ್ನ ತ್ರಿಚಕ್ರ ವಾಹನವನ್ನು ಜಾನ್ ಡಿಸೋಜ ಎಂಬ ಇನ್ನೊಬ್ಬ ವ್ಯಕ್ತಿಯನ್ನು ಚಾಲಕನ್ನನಾಗಿ ನೇಮಿಸಿ ಬಾಡಿಗೆಗೆ ನೀಡಿರುವುದಾಗಿ ಹಾಗೂ ಸದ್ರಿ ಅಪರಾಧಕ್ಕೂ, ತನಗೂ ಯಾವುದೇ ಸಂಬಂಧವಿಲ್ಲವೆಂದು ತನ್ನ ರಕ್ಷಣಾ ಸಾಕ್ಷಿಯಲ್ಲಿ ತಿಳಿಸಿರುವುದಾದರೂ, ತನ್ನ ವಾಹನಕ್ಕೆ ಚಾಲಕನನ್ನು ನೇಮಿಸುವ ಸಂದರ್ಭದಲ್ಲಿ ಯಾವುದೇ ದಾಖಲೆಗಳನ್ನು ತಯಾರಿಸಿರುವುದಿಲ್ಲ ಹಾಗೂ ವಾಹನವನ್ನು ಯಾವುದೇ ಅಕ್ರಮ ಚಟುವಟಿಕೆಗಳಿಗೆ ಬಳಸಬಾರದೆಂಬ ಮುಂಜಾಗತಾ ಸೂಚನೆಗಳನ್ನು ನೀಡಿರುವ ಬಗ್ಗೆ ಯಾವುದೇ ಪುರಾವೆಗಳನ್ನು ಒದಗಿಸಿರುವುದಿಲ್ಲ. ಹಾಗೂ ತನ್ನ ಹೇಳಿಕೆಗಳಲ್ಲಿ ಸತ್ಯಾಂಶವಿರುವುದನ್ನು ಸಾಬೀತುಪಡಿಸಲು ಪುರಾವೆಗಳನ್ನು ಒದಗಿಸಿರುವುದಿಲ್ಲ. ಅಲ್ಲದೇ ಪ್ರಕರಣದಲ್ಲಿ ವಾಹನದ ಆರ್.ಸಿ.ಮಾಲೀಕನೇ ಮುಖ್ಯ ಅರೋಪಿತ ವ್ಯಕ್ತಿಯಾಗಿ ಬಂಧಿತನಾಗಿರುವುದರಿಂದ ಸೂಕ್ಷವಾಗಿ ಪ್ರಾದಿಕಾರವು ಮನಗಂಡು ವಾಹನದ ಮಾಲೀಕರೇ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆಗೆ ತನ್ನ ವಾಹನವನ್ನು ಉದ್ದೇಶಪೂರ್ವಕವಾಗಿ ಬಳಸಿಕೊಂಡು ಪ್ರಕರಣದಲ್ಲಿ ಸಿಲುಕಿಕೊಂಡ ನಂತರದಲ್ಲಿ ತನ್ನ ಅಪರಾಧವನ್ನು ಮರೆಮಾಚುವ ದೃಷ್ಟಿಯಿಂದ ರಕ್ಷಣಾ ಹೇಳಿಕೆಯನ್ನು ನೀಡಲು ಮುಂದಾಗಿರುವುದನ್ನು ಮನಗಂಡು ವಾಹನದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಟ ಮಾಡಿರುವುದು ಸಾಬೀತಾಗಿರುವುದಾಗಿ ಅಭಿಪ್ರಾಯಪಡಲಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಅಬಕಾರಿ ಉಪ ನಿರೀಕ್ಷಕರು(1) ಮಂಗಳೂರು ಉತ್ತರ ವಲಯ–1 ಇವರು ವಶಪಡಿಸಿಕೊಂಡ ವಾಹನ ತ್ರಿಚಕ್ರ ವಾಹನ ನೊಂದಣಿ ಸಂ: KA-19-B-6315 ಗೂಡ್ಸ್ ಟೆಂಪೋವನ್ನು ವಶಪಡಿಸಿಕೊಂಡು ಸುಮಾರು 5 ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ಈ ಪ್ರಾಧಿಕಾರದಲ್ಲಿ ನಡೆಸಲಾದ ಸಾಕ್ಷಿ ವಿಚಾರಣೆಯಿಂದ ವಾಹನದಲ್ಲಿ ಅಕ್ರಮ ಕಳ್ಳಭಟ್ಟಿ ಸಾರಾಯಿ ಸಾಗಾಣಿಕೆ ಮಾಡಿರುವುದು ಸಾಬೀತಾಗಿರುವುದರಿಂದ ತ್ರಿಚಕ್ರ ವಾಹನ ನೊಂದಣಿ ಸಂ: KA-19-B-6315 ಟೆಂಪೋವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡುಬಂದ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43 ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು(1), ಮಂಗಳೂರು ಉತ್ತರ ವಲಯ–1 ಇವರ ಪ್ರ.ಮಾ.ವ ಸಂ:28/2008–09, ದಿನಾಂಕ:25.01.2009 ರಲ್ಲಿ ಅಕ್ರಮ ಮದ್ಯಸಾರ ಸಾಗಾಣಿಕೆಗೆ ಬಳಸಿದ ತ್ರಿಚಕ್ರ ವಾಹನ ನೊಂದಣಿ ಸಂ:KA-19-B-6315 ಗೂಡ್ಸ್ ಟೆಂಪೊ (ಚಾಸೀಸ್ ಸಂಖ್ಯೆ: T700001 39A06 ಮತ್ತು ಇಂಜಿನ್ ಸಂಖ್ಯೆ:D51000341) ಗೂಡ್ಸ್ ಟೆಂಪೋವನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಎ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:22.07.2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹ್ಮಮದ್ ಹುಸೇನ್**

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–I : ಶ್ರೀ ವಿನೋದ್ ಕುಮಾರ್, ಅಬಕಾರಿ ನಿರೀಕ್ಷಕರು, ಮಂಗಳೂರು ಉತ್ತರ ವಲಯ–I, ಮಂಗಳೂರು.

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | |
|---|---|
| ನಿಶಾನೆ ಪಿ–I | : ಮಹಜರು ಪ್ರತಿ |
| ನಿಶಾನೆ ಪಿ–Iಎ | : ಅದರ ಮೇಲಿನ ಸಹಿ |
| ನಿಶಾನೆ ಪಿ–2 | : ಪ್ರಥಮ ವರ್ತಮಾನ ವರದಿ |
| ನಿಶಾನೆ ಪಿ–2ಎ | : ಅದರ ಮೇಲಿನ ಸಹಿ |
| ನಿಶಾನೆ ಪಿ–3 | : ರಾಸಾಯನಿಕ ವಿಶ್ಲೇಷಣಾ ವರದಿ |
| ನಿಶಾನೆ ಪಿ–4 | : ಬಿ ಎಕ್ಸ್‌ಟ್ರಾಕ್ಟ್ ವರದಿ |
| ನಿಶಾನೆ ಪಿ–5 | : ತನಿಖಾ ವರದಿ |
| ನಿಶಾನೆ ಪಿ–5ಎ | : ಅದರ ಮೇಲಿನ ಸಹಿ |

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

**ರಕ್ಷಣಾ ಸಾಕ್ಷಿದಾರರು:** ಜಯಕರ ಆರ್. ಶೆಟ್ಟಿ ಬಿನ್ ರಾಮಣ್ಣ ಶೆಟ್ಟಿ, ಜ್ಯೋತಿನಗರ, ಕುಂಜತ್ತಬೈಲ್, ಮಂಗಳೂರು ತಾಲ್ಲೂಕು.

**ಅರ್ಜಿದಾರರ ಹೇಳಿಕೆ:** – ಯಾವುದು ಇಲ್ಲ –

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:** – ಯಾವುದು ಇಲ್ಲ–

**ನೂರ್ ಮಹ್ಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.737

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ: ಎಸ್‌ಡಿಕೆ/362/ಡಿಟಿಸಿಆರ್/2008–09, ದಿನಾಂಕ:17ನೇ ಜುಲೈ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ:** |
|---|---|
| ಅಬಕಾರಿ ಉಪ ನಿರೀಕ್ಷಕರು,<br>ಮಂಗಳೂರು ಉಪ ವಿಭಾಗ–1, ಮಂಗಳೂರು. | ಮ್ಯಾಕ್ಸಿಯಂ ಡಿ.ಸಿಲ್ವಾ,ಬಿನ್:ಲೂಯಿಸ್ ಡಿಸಿಲ್ವಾ, ಮನೆ ಸಂ:4/1<br>ಬೈತುರ್ಲಿ, ಕುಡುಪು ಗ್ರಾಮ, ಮಂಗಳೂರು ತಾಲ್ಲೂಕು, ದ.ಕ ಜಿಲ್ಲೆ. |
| | **ವಾಹನ ಮಾಲೀಕರು:** |
| | ಶ್ರೀ ನಜೀರ್ ಅಹಮ್ಮದ್, ಬಿನ್ ಅಬೂಬಕ್ಕರ್, ಮನೆ ಸಂ:10–24/<br>10/52 /ಸಿ, ಬಂದರು, ಮಂಗಳೂರು. |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪವಿಭಾಗ–1, ಮಂಗಳೂರು ಇವರು ಸಿಬ್ಬಂದಿಯವರೊಂದಿಗೆ ಮಂಗಳೂರು ತಾಲ್ಲೂಕು ಕುಡುಪು ಗ್ರಾಮದ ಬೈತುರ್ಲಿ ಎಂಬಲ್ಲಿರುವ ಮ್ಯಾಕ್ಸಿಯಂ ಡಿಸಿಲ್ವಾ ಎಂಬವರ ಮನೆಯಲ್ಲಿ ಅಕ್ರಮವಾಗಿ ಮದ್ಯ ಮಾರಾಟ ಮಾಡುತ್ತಿದ್ದಾರೆ ಎಂಬ ಮಾಹಿತಿಯ ಮೇರೆಗೆ ಸದ್ರಿ ಮನೆಗೆ ದಾಳಿ ನಡೆಸಿದಾಗ ಮನೆಯ ಎದುರು ಅಂಗಳದಲ್ಲಿ ನಿಲ್ಲಿಸಲಾಗಿದ್ದ KA-21-E-8107 ನಂಬರ್‌ದ ಸ್ಕೂಟರ್‌ನಿಂದ ಒಬ್ಬ ವ್ಯಕ್ತಿಯು ಒಂದು ನೈಲಾನ್ ಚೀಲದ ಕಟ್ಟನ್ನು ತೆಗೆದು ಮನೆಯ ಒಳಗೆ ಓಡಿ ಹೋಗುವುದನ್ನು ಗಮನಿಸಿ, ಅನುಮಾನಗೊಂಡು, ಮನೆಯ ಒಳಗೆ ಓಡಿ ಹೋದ ವ್ಯಕ್ತಿಯನ್ನು ವಿಚಾರಿಸಲಾಗಿ ಆತನು ತನ್ನ ಹೆಸರು ಮ್ಯಾಕ್ಸಿಯಂ ಡಿಸಿಲ್ವಾ,ಬಿನ್:ಲೂಯಿಸ್ ಡಿಸಿಲ್ವಾ, ಮನೆ ಸಂ:4/1 ಬೈತುರ್ಲಿ, ಕುಡುಪುಗ್ರಾಮ, ಮಂಗಳೂರು ತಾಲೂಕು,ದ.ಕ ಜಿಲ್ಲೆ ಎಂದು ತಿಳಿಸಿದನು. ನಂತರ ಮಾಹಿತಿಯಂತೆ ಮನೆಯನ್ನು ಶೋಧಿಸಲು ತೀರ್ಮಾನಿಸಿ, ಮಾನ್ಯ ನ್ಯಾಯಾಲಯದಿಂದ ಶೋಧನಾ ವಾರೆಂಟ್ ಪಡೆಯಲು ಸಮಯಾವಕಾಶ ಇಲ್ಲದೇ ಇರುವ ಕಾರಣ ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 54 ರಲ್ಲಿ ದತ್ತವಾದ ಅಧಿಕಾರದ ಪ್ರಕಾರ ಸರ್ಚ್ ವಾರೆಂಟನ್ನು ತಯಾರಿಸಿ,

ಮನೆಯನ್ನು ಶೋಧಿಸಿದಾಗ ಈ ಕೆಳಕಂಡಂತೆ ಅಕ್ರಮ ಮದ್ಯ ಮತ್ತು ಬಿಯರ್ ದಾಸ್ತಾನು ಇರುವುದನ್ನು ಪತ್ತೆ ಹಚ್ಚಿ, ಸದ್ರಿ ಮದ್ಯ ಮತ್ತು ಬೀರನ್ನು ಹೊಂದಿರಲು ಯಾವುದಾದರೂ ದಾಖಲೆಗಳು ಇದೆಯೋ ಎಂದು ಆ ವ್ಯಕ್ತಿಯನ್ನು ವಿಚಾರಿಸಲಾಗಿ ಅದು ಯಾವುದೂ ಇಲ್ಲವೆಂದು ಆತನು ತಿಳಿಸಿದ್ದು, ಹಾಗೂ ಸದ್ರಿ ಮದ್ಯ/ಬೀರನ್ನು ಚುನಾವಣಾ ಸಮಯದ ಮದ್ಯ ಮುಕ್ತ ದಿನಗಳ ಸಂದರ್ಭಗಳಲ್ಲಿ ಹೆಚ್ಚಿನ ಬೆಲೆಗೆ ಮಾರಾಟ ಮಾಡುವ ಉದ್ದೇಶದಿಂದ ಹೊಂದಿರುವುದಾಗಿ ಸದ್ರಿ ವ್ಯಕ್ತಿಯು ತಿಳಿಸಿದನು. ಇದು ಅಬಕಾರಿ ಕಾಯಿದೆ ಯಂತೆ ಅಪರಾದವೆಂದು ತಿಳಿಸಿ, ಸ್ಕೂಟರ್ ಮತ್ತು 41.250 ಲೀ ನಕಲಿ ಮದ್ಯ ಮತ್ತು 24.660 ಲೀಟರು ಭಾ.ತ.ಮ ಹಾಗೂ 10.560 ಲೀಟರು ಬಿಯರನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಆತನನ್ನು ದಸ್ತಗಿರಿ ಮಾಡಿ, ನಂತರ ಸ್ಕೂಟರಿನಲ್ಲಿ ದೊರೆತ ಮದ್ಯದಿಂದ 28 ಬಾಟಲಿಗಳು ಹಾಗೂ ಮನೆಯ ಒಳಗಡೆ ದೊರೆತ ಮದ್ಯ ಹಾಗೂ ಬಿಯರಿನಿಂದ ತಲಾ ಬ್ರಾಂಡುವಾರು ಮತ್ತು ಗಾತ್ರವಾರು ಒಂದೊಂದು ಬಾಟಲಿಗಳಂತೆ ಒಟ್ಟು 14 ಬಾಟಲಿಗಳನ್ನು ಈ ರೀತಿಯಾಗಿ ಒಟ್ಟು 44 ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು ಇಲಾಖಾ ಸೀಲ್‌ನಿಂದ ಸೀಲ್ ಮಾಡಿ, ಸದರಿ ಸೊತ್ತುಗಳನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು, ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 13, ಮತ್ತು 14 ರಂತೆ ಅಪರಾಧವಾಗಿದ್ದು, ಕಲಂ 32 ಮತ್ತು 38(ಎ) ರಂತೆ ಶಿಕ್ಷಾರ್ಹವಾಗಿರುವುದರಿಂದ, ದಸ್ತಗಿರಿಯಾದ ಆರೋಪಿಯ ವಿರುದ್ದ ತಕ್ಷೀರು ಸಂ:3/2009–10 ದಿನಾಂಕ:25.04.2009 ರಂತೆ ಪ್ರಕರಣವನ್ನು ನೋಂದಾಯಿಸಿ ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಹಾಗೂ ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಮತ್ತು ಅರೋಪಿಯನ್ನು ದಸ್ತಗಿರಿ ಮಾಡಿ ಮಾನ್ಯ ನ್ಯಾಯಾಲಯಕ್ಕೆ ಒಪ್ಪಿಸಿರುತ್ತಾರೆ.

**ಜಪ್ತುಪಡಿಸಿಕೊಂಡ ಸೊತ್ತುಗಳು**

1) ಸ್ಕೂಟರ್ ನೊಂದಣಿ ಸಂ:KA-21-E-8107
2) ನಾದಾನ್ ವಿಸ್ಕಿ ಎಂದು ಲೇಬಲ್ ಹಚ್ಚಿದ 750 ಮಿ.ಲಿಯ 35 ಬಾಟಲಿಗಳು
3) ಸ್ಮಾಲ್ ಫೀಟರ್ ಎಂದು ಲೇಬಲ್ ಹಚ್ಚಿದ 750 ಮಿ.ಲಿಯ 20 ಬಾಟಲಿಗಳು
4) ಗೊಲ್ಕೊಂಡಾ ರೂಬಿ ವೈನ್ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 15 ಬಾಟಲಿಗಳು
5) ಆಫೀಸರ್ಸ್ ಚಾಯ್ಸ್ ಎಂದು ಲೇಬಲ್ ಹಚ್ಚಿದ180 ಮಿ.ಲಿಯ 18 ಬಾಟಲಿಗಳು
6) ವಿಂಡ್ಸರ್ ವಿಸ್ಕಿ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 22 ಬಾಟಲಿಗಳು
7) ಪ್ರೆಸ್ಟೀಜ್ ವಿಸ್ಕಿ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 8 ಬಾಟಲಿಗಳು
8) ಬಾಸ್ ವಿಸ್ಕಿ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 12ಬಾಟಲಿಗಳು
9) ಒರಿಜಿನಲ್ ಚಾಯ್ಸ್ ವಿಸ್ಕಿ ಎಂದು ಲೇಬಲ್ ಹಚ್ಚಿದ 90 ಮಿ.ಲಿಯ 20 ಬಾಟಲಿಗಳು
10) ಓಲ್ಡ್ ಮಾಂಕ್ ರಮ್ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 7 ಬಾಟಲಿಗಳು
11) ಬ್ಯಾಗ್ ಪೈಪರ್ ವಿಸ್ಕಿ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 5 ಪ್ಯಾಕೆಟ್‌ಗಳು
12) ಡಿ.ಎಸ್.ಪಿ ವಿಸ್ಕಿ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 4 ಪ್ಯಾಕೆಟ್‌ಗಳು
13) ಖೋಡೇಸ್ ಎಕ್ಸ್ ರಮ್ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 8 ಬಾಟಲಿಗಳು
14) ಮೈಸೂರ್ ಲ್ಯಾನ್ಸರ್ ವಿಸ್ಕಿ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 28 ಬಾಟಲಿಗಳು
15) ಯು.ಬಿ ಬಿಯರ್ ಎಂದು ಲೇಬಲ್ ಹಚ್ಚಿದ 330 ಮಿ.ಲಿಯ 14 ಬಾಟಲಿಗಳು
16) ಕಿಂಗ್ ಫಿಷರ್ ಬಿಯರ್ ಎಂದು ಲೇಬಲ್ ಹಚ್ಚಿದ 330 ಮಿ.ಲಿಯ 18 ಬಾಟಲಿಗಳು

ಪ್ರಕರಣದ ತನಿಖೆಯನ್ನು ಮುಂದುವರಿಸಿ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ–1, ಮಂಗಳೂರು ಇವರು ಜಪ್ತುಪಡಿಸಿಕೊಂಡ ಮದ್ಯ ಮತ್ತು ಬಿಯರಿನ ಸ್ಯಾಂಪಲ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ,ಸಹಾಯಕ ರಾಸಾಯನಿಕ ವಿಶ್ಲೇಷಕರು,ಮಂಗಳೂರು ವಿಭಾಗ ಇವರ ರಾಸಾಯನಿಕ ವಿಶ್ಲೇಷಣಾ ವರದಿ ಸಂ:ಇ–213–42, ದಿನಾಂಕ:19.06.2009ರ ಪ್ರತಿಯನ್ನು ದಿನಾಂಕ:23.06.2009ರ ವರದಿಯೊಂದಿಗೆ ಲಗತ್ತಿಸಿ ಪ್ರಾಧಿಕಾರಕ್ಕೆ ಕಳುಹಿಸಿಕೊಡುತ್ತಾ ಸದ್ರಿ ಜಪ್ತಾದ ಮದ್ಯದಲ್ಲಿ ಮದ್ಯಸಾರದ ಪ್ರಮಾಣ 15.5% ದಿಂದ 42.0% ದ ವರೆಗೆ ಇರುವುದಾಗಿ ಹಾಗೂ ಬಿಯರಿನಲ್ಲಿ ಮದ್ಯಸಾರದ ಪ್ರಮಾಣ 4.75% ಇರುವುದಾಗಿ ರಾಸಾಯನಿಕ ವಿಶ್ಲೇಷಕರು ದೃಡೀಕರಿಸಿ ಪತ್ರ ನೀಡಿರುತ್ತಾರೆ ಎಂದು ತಿಳಿಸಿ ಸದ್ರಿ ಮದ್ಯ ಹಾಗೂ ಬೀರನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಶಿಫಾರಸ್ಸು ಮಾಡಿರುತ್ತಾರೆ.

ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ–1, ಮಂಗಳೂರು ಇವರು ಜಪ್ತುಪಡಿಸಿದ ವಾಹನ ಸಂಖ್ಯೆ: KA-21-E-8107 ರ ಸ್ಕೂಟರಿನ ಬಿ ಎಕ್ಸ್‌ಟ್ರಾಕ್ಟ್ ವರದಿಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ಇವರಿಂದ ಪಡೆದು ದಿನಾಂಕ:06.06.2009 ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸಾರಿಗೆ ಅಧಿಕಾರಿಗಳು ಸಲ್ಲಿಸಿದ ಬಿ ಎಕ್ಸ್‌ಟ್ರಾಕ್ಡ್ ವರದಿಯ ಪ್ರಕಾರ ವಾಹನದ ನೋಂದಣಿ ಸಂಖ್ಯೆ: KA-21-E-8107 ಬಜಾಜ್ ಆಟೋ ಲಿಮಿಟೆಡ್ ಕಂಪೆನಿಯಲ್ಲಿ ನಿರ್ಮಿತವಾಗಿದ್ದು, ಇದರ ಚಾಸೀಸ್ ನಂ: 06F BED 94126 ಮತ್ತು ಇಂಜಿನ್ ನಂ: 35 MBED 43538 ಆಗಿರುತ್ತದೆ.

ಇದರ ನೋಂದಣಿ ಮಾಲೀಕರಾದ ಶ್ರೀ ನಜೀರ್ ಅಹಮ್ಮದ್, ಬಿನ್: ಅಬೂಬಕ್ಕರ್, ಮನೆ ಸಂ:10–24/10/52/ಸಿ, ಬಂದರು, ಮಂಗಳೂರು ನಗರ ಎಂದು ದೃಢೀಕರಣ ಪತ್ರ ನೀಡಿರುತ್ತಾರೆ.

ಸಾರಿಗೆ ಅಧಿಕಾರಿಗಳು, ಮಂಗಳೂರು ಇವರು ನೀಡಿರುವ ವಾಹನದ ಬಿ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ವಾಹನದ ನೋಂದಣಿ ಮಾಲೀಕರಾದ ಶ್ರೀ ನಜೀರ್ ಅಹಮ್ಮದ್, ಬಿನ್ ಅಬೂಬಕ್ಕರ್, ಮನೆ ಸಂ:10–24/10/52/ಸಿ, ಬಂದರು, ಮಂಗಳೂರು ನಗರ ಇವರಿಗೆ ಮತ್ತು ಪ್ರಕರಣದ ಆರೋಪಿ ಮ್ಯಾಕ್ಸಿಯಂ ಡಿಸಿಲ್ವಾ ಇವರಿಗೆ ಆ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಸೆಕ್ಷನ್ 43(ಬಿ) ಪ್ರಕಾರ ಕಾರಣ ಕೇಳಿ ನೋಟೀಸನ್ನು ದಿನಾಂಕ:08.06.2009 ರಂದು ನೋಂದಣಿ ಅಂಚೆ ಮೂಲಕ ನೀಡಲಾಗಿದ್ದು, ಸದರಿ ನೋಟೀಸು ವಾಹನದ ಮಾಲೀಕರಿಗೆ ದಿನಾಂಕ:16.06.2009 ರಂದು ಜಾರಿಯಾಗಿದ್ದು, ಸದ್ರಿಯವರು ದಿನಾಂಕ:18.06.2009 ರಂದು ಈ ಪ್ರಾಧಿಕಾರಕ್ಕೆ ಉತ್ತರವನ್ನು ಸಲ್ಲಿಸುತ್ತಾ ಸದ್ರಿ ವಾಹನ ಸ್ಕೂಟರ್ ಸಂ: KA-21-E-8107ನ್ನು ಸುಮಾರು 6 ತಿಂಗಳ ಹಿಂದೆಯೇ ಪ್ರಕರಣದ ಆರೋಪಿತ ವ್ಯಕ್ತಿಯಾಗಿರುವ ಮ್ಯಾಕ್ಸಿಯಂ ಡಿಸಿಲ್ವಾ, ಬಿನ್ ಲೂಯಿಸ್ ಡಿಸಿಲ್ವಾ ಇವರಿಗೆ ರೂ.2,500/– ಮೌಲ್ಯಕ್ಕೆ ಮಾರಾಟ ಮಾಡಿ ನೊಂದಣಿ ವರ್ಗಾವಣೆ ಬಗ್ಗೆ ಸಂಬಂಧಪಟ್ಟ ದಾಖಲಾತಿಗಳಿಗೆ ಸಹಿ ಮಾಡಿ ನೀಡಿರುತ್ತೇನೆ. ಕಾರಣ ಸದ್ರಿ ವಾಹನಕ್ಕೂ ನನಗೂ ಯಾವುದೇ ಸಂಬಂಧವಿಲ್ಲವೆಂದು ತಿಳಿಸಿ, ವಾಹನದ ಮೇಲೆ ಕಾನೂನು ಕ್ರಮ ಕೈಗೊಳ್ಳುವರೇ ತನ್ನಿಂದ ಅಭ್ಯಂತರವಿರುವುದಿಲ್ಲವೆಂದು ತಿಳಿಸಿರುತ್ತಾರೆ. ಹಾಗೂ ಆರೋಪಿತ ವ್ಯಕ್ತಿಗೆ ಸದ್ರಿ ನೋಟಿಸು ದಿನಾಂಕ:20.06.2009ರಂದು ಜ್ಯಾರಿಯಾಗಿದ್ದು, ಸದರಿ ನೋಟೀಸಿಗೆ ಅವರಿಂದ ಯಾವುದೇ ಉತ್ತರ ಪ್ರಾಧಿಕಾರದಲ್ಲಿ ಸ್ವೀಕೃತವಾಗಿರುವುದಿಲ್ಲ.

ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ–1, ಮಂಗಳೂರು ಇವರ ತನಿಖಾ ವರದಿ ಸಂಖ್ಯೆ:ಎಂಎಸ್ ಡಿ–1 :ಎಸ್‌ಐಇ:ಸಿಆರ್‌ಎಂ:3:2009–10 ದಿನಾಂಕ:27.06.2009 ರ ತನಿಖಾ ವರದಿಯಲ್ಲಿ ಪ್ರಕರಣದಲ್ಲಿ ಜಪ್ತಾದ ವಾಹನದ ಬಿಡುಗಡೆಗಾಗಿ ಯಾವೊಬ್ಬರು ಅರ್ಜಿಯನ್ನು ಸಲ್ಲಿಸದೇ ಇರುವುದರಿಂದ ಜಪ್ತು ಪಡಿಸಲಾದ ವಾಹನ, ಮದ್ಯ ಹಾಗೂ ಬೀರನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

1965ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ಮತ್ತು ವಾಹನ ತಮ್ಮದೆಂದು, ಅವುಗಳು ಕಾನೂನುಬದ್ದವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43 ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:25.04.2009 ರಂದು ಸ್ಕೂಟರ್ ಸಂ: KA-21-E-8107ನ್ನು ಅಕ್ರಮವಾಗಿ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಆರೋಪಿಯು ಮದ್ಯ ಮತ್ತು ಬೀರ್ ಸಾಗಾಣಿಕೆ ಮಾಡುವುದಕ್ಕೆ ಬಳಸಿರುವುದನ್ನು ಪತ್ತೆ ಹಚ್ಚಿ, ಸದ್ರಿ ವಾಹನವನ್ನು ಮತ್ತು ಅಕ್ರಮ ಸೊತ್ತುಗಳನ್ನು ಸ್ಥಳ ಮಹಜರು ಮುಖೇನ ಸ್ವಾಧೀನಪಡಿಸಿದ್ದು ಹಾಗೂ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ ವರದಿಯಂತೆ ಮದ್ಯ ಮತ್ತು ಬೀರ್ ಎಂದು ದೃಢಪಟ್ಟಿದ್ದು, ಸದ್ರಿ ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದರಿಂದ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಮೇಲಿನ ವಿದ್ಯಾಮಾನಗಳ ಸಂದರ್ಭದಲ್ಲಿ ವಾಹನದ ಮುಟ್ಟುಗೋಲು ನಡವಳಿ ವಿಚಾರಣೆಯನ್ನು ಪ್ರಾರಂಬಿಸಿ ಅಭಿಯೋಗದ ಪರ ಪ್ರಕರಣ ದಾಖಲು ಮಾಡಿರುವ ಒರ್ವ ಸಾಕ್ಷಿದಾರರನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿಯ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಪ್ರತಿರಕ್ಷಾ ಸಾಕ್ಷಿಗಳು ಹಾಜರಾಗದೇ ಇದ್ದುದರಿಂದ ಪ್ರತಿರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಗದ ಪರ ಸಲ್ಲಿಸಿರುವ ಸಾಕ್ಷಾಧಾರಗಳಿಂದ ಈಕೆಳಗಿನ ವಿವಾಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

1. ದಿನಾಂಕ:25.04.2009 ರಂದು KA-21-E-8107 ಸ್ಕೂಟರ್ ಇದನ್ನು ಅಕ್ರಮವಾಗಿ ನಕಲಿ ಮದ್ಯ, ಭಾ.ತ.ಮದ್ಯ ಮತ್ತು ಬಿಯರನ್ನು ಸಾಗಾಣಿಕೆ ಮಾಡಲು ಬಳಸಲಾಗಿದೆಯೇ?
2. ವಶಪಡಿಸಿಕೊಂಡಿರುವ ವಾಹನದ ಮಾಲೀಕ ತಾನೆಂದು, ತನಗೆ ತಿಳಿಯದೇ ಅಕ್ರಮ ನಕಲಿ ಮದ್ಯ ,ಭಾ.ತ. ಮದ್ಯ ಮತ್ತು ಬಿಯರ್ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?
3. ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದನೇ ಅಂಶವನ್ನು ಗುಣಾತ್ಮಕವಾಗಿ,ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:**

ಶ್ರೀ ಕೆ. ಮೋಹನ್ ರಾವ್, ಅಉ.ನಿ ಮಂಗಳೂರು ಉಪ ವಿಭಾಗ–1 ಇವರು ದಿನಾಂಕ:15.07.2009ರಂದು ಸಾಕ್ಷ್ಯ ನೀಡುತ್ತಾ ತಾನು ಮಂಗಳೂರು ಉಪ ವಿಭಾಗ–1 ರಲ್ಲಿ ಎಪ್ರಿಲ್–2008 ರಿಂದ ಅಬಕಾರಿ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ:25.04.2009ರಂದು ಮಂಗಳೂರು ತಾಲೂಕು ಕುಡುಪು ಗ್ರಾಮದ ಬೈತುರ್ಲಿ ಎಂಬಲ್ಲಿರುವ ಮ್ಯಾಕಿಯಂ ಡಿಸಿಲ್ವಾ ಎಂಬವರು ಮನೆಯಲ್ಲಿ ಅಕ್ರಮವಾಗಿ ಮದ್ಯ ಮಾರಾಟ ಮಾಡುತ್ತಿದ್ದಾರೆ ಎಂದು ದೊರೆತ ಖಚಿತ ವರ್ತಮಾನದ ಮೇರೆಗೆ ಸಿಬ್ಬಂಧಿಯವರೊಂದಿಗೆ ಸರ್ಕಾರಿ ವಾಹನ ಸಂ:KA-19G-298ರಲ್ಲಿ ಸದ್ರಿ ಕುಲಶೇಖರದಿಂದ ಕುಡುಪಿಗೆ ಹೋಗುವ ಮುಖ್ಯ ರಸ್ತೆಯ ಬೈರ್ತುಲಿ ಎಂಬಲ್ಲಿ ಮಾಹಿತಿ ಇರುವ ಮನೆಯ ಎದುರು ಭಾಗದಲ್ಲಿ ವಾಹನವನ್ನು ನಿಲ್ಲಿಸಿ ಸದ್ರಿ ಮನೆಯ ಅಂಗಳಕ್ಕೆ ಹೋದಾಗ ಅಂಗಳದಲ್ಲಿ ಒಂದು ಸ್ಕೂಟರ್ ನಿಂತಿದ್ದು, ಅದರ ಪಕ್ಕದಲ್ಲಿ ಓರ್ವ ವ್ಯಕ್ತಿಯು ಸ್ಕೂಟರಿನಿಂದ ನೈಲಾನ್ ಚೀಲದ ಕಟ್ಟನ್ನು ತೆಗೆದುಕೊಂಡು ಮನೆಯ ಒಳಗೆ ಓಡಿಹೋದನು. ಸಂಶಯಗೊಂಡು ನಾವುಗಳು ಮನೆಯ ಎದುರಿಗೆ ಮನೆಯಲ್ಲಿ ಯಾರಿದ್ದಾರೆ ಎಂದು ಕರೆದಾಗ ಆ ವ್ಯಕ್ತಿಯು ಬಾಗಿಲು ತೆಗೆದು ಹೊರಗೆ ಬಂದನು. ವ್ಯಕ್ತಿಯ ಹೆಸರು ವಿಳಾಸ ವಿಚಾರಿಸಿದಾಗ ಮ್ಯಾಕಿಯಂ ಡಿಸಿಲ್ವಾ ಬಿನ್ ಲೂಯಿಸ್ ಡಿಸಿಲ್ವಾ, ಪ್ರಾಯ: 48 ವರ್ಷ, ಬೈರ್ತುಲಿ ಮನೆ ಸಂ:1–4/1ರ ನಿವಾಸಿಯೆಂದು ತಿಳಿಸಿದನು. ನಾವುಗಳು ಬಂದ ವಿಚಾರವನ್ನು ಆತನಿಗೆ ತಿಳಿಸಿ ಅತನ ಮನೆ ಮತ್ತು ಸ್ಕೂಟರನ್ನು ಶೋಧಿಸಬೇಕೆಂದು ತಿಳಿಸಿದೆವು. ಮಾನ್ಯ ನ್ಯಾಯಾಲಯದಿಂದ ಶೋಧನಾ ವಾರೆಂಟನ್ನು ಪಡೆಯಲು ಸಮಯಾವಕಾಶವಿಲ್ಲದೇ ಇರುವ ಕಾರಣ ಕಾ.ಕಾಯಿದೆ 1965ರ ಕಲಂ 54ರಲ್ಲಿ ದತ್ತವಾದ ಅಧಿಕಾರದ ಪ್ರಕಾರ ಶೋಧನಾ ಸಮುಚಿತ ದಾಖಲೆಯನ್ನು ಮಾಡಿ ಹಾಜರಿದ್ದ ಅರೋಪಿಯ ಸಮಕ್ಷಮದಲ್ಲಿ ಸದ್ರಿ ಮನೆಯ ಅಂಗಳದಲ್ಲಿದ್ದ ಸ್ಕೂಟರನ್ನು ಶೋಧಿಸಲಾಗಿ ಸ್ಕೂಟರಿನ ಎದುರು ಬದಿಯಲ್ಲಿ ಕಾಲು ಇಡುವ ಜಾಗದ ಮೇಲಿದ್ದ ಬಾಕ್ಸ್‌ನ್ನು ತೆರೆದು ನೋಡಿದಾಗ ಅದರಲ್ಲಿ ಒಂದು ಪ್ಲಾಸ್ಟಿಕ್ ಚೀಲದಲ್ಲಿ ಮೈಸೂರು ಲ್ಯಾನ್ಸರ್ ವಿಸ್ಕಿ ಎಂಬ ಲೇಬಲ್ ಹಚ್ಚಿರುವ 180 ಮಿಲಿಯ 28 ಬಾಟಲಿಗಳು ಇರುವುದು ಕಂಡು ಬಂದವು. ಈ ರೀತಿ ಮದ್ಯ ಹೊಂದಲು ಯಾವುದೇ ರಹದಾರಿ ಪತ್ರವಿದೆಯೇ ಎಂದು ಆತನನ್ನು ವಿಚಾರಿಸಲಾಗಿ ಅದು ಯಾವುದು ಇಲ್ಲವೆಂದು ತಿಳಿಸಿದನು. ಹಾಗೂ ಮನೆಯ ಒಳಗೂ ಸ್ವಲ್ಪ ಮದ್ಯದ ಬಾಟಲಿಗಳು ಇರುವುದಾಗಿ ತಿಳಿಸಿದನು. ಆ ಪ್ರಕಾರ ಮನೆಯ ಒಳಗೆ ಪ್ರವೇಶಿಸಲಾಗಿ ಮನೆಯ ಹಾಲ್‌ನ ಮೂಲೆಯಲ್ಲಿ ಗೋಣಿಚೀಲ ಮುಚ್ಚಿದ ಸ್ದಿತಿಯಲ್ಲಿ ಕೆಲವು ಪ್ಲಾಸ್ಟಿಕ್ ಚೀಲದ ಕಟ್ಟುಗಳಿದ್ದು ಅವುಗಳನ್ನು ಪರಿಶೀಲಿಸಲಾಗಿ ಈಕೆಳಕಂಡಂತೆ ಮದ್ಯದ ಬಾಟಲಿಗಳು ಇರುವುದು ಕಂಡುಬಂತು.

1) ನಾದಾನ್ ವಿಸ್ಕಿ ಎಂದು ಲೇಬಲ್ ಹಚ್ಚಿದ 750 ಮಿ.ಲಿಯ 35 ಬಾಟಲಿಗಳು
2) ಸ್ಮಾಲ್ ಷೀಟರ್ ಎಂದು ಲೇಬಲ್ ಹಚ್ಚಿದ 750 ಮಿ.ಲಿಯ 20 ಬಾಟಲಿಗಳು
3) ಗೋಲ್ಕೊಂಡಾ ರೂಬಿ ವೈನ್ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 15 ಬಾಟಲಿಗಳು
4) ಆಫೀಸರ್ಸ್ ಚಾಯ್ಸ್ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 18 ಬಾಟಲಿಗಳು
5) ವಿಂಡ್ಸರ್ ವಿಸ್ಕಿ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 22 ಬಾಟಲಿಗಳು
6) ಪ್ರೆಸ್ಟೀಜ್ ವಿಸ್ಕಿ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 8 ಬಾಟಲಿಗಳು
7) ಬಾಸ್ ವಿಸ್ಕಿ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 12 ಬಾಟಲಿಗಳು
8) ಒರಿಜಿನಲ್ ಚಾಯ್ಸ್ ವಿಸ್ಕಿ ಎಂದು ಲೇಬಲ್ ಹಚ್ಚಿದ 90 ಮಿ.ಲಿಯ 20 ಬಾಟಲಿಗಳು
9) ಓಲ್ಡ್ ಮಾಂಕ್ ರಮ್ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 7 ಬಾಟಲಿಗಳು
10) ಬ್ಯಾಗ್ ಪೈಪರ್ ವಿಸ್ಕಿ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 5 ಪ್ಯಾಕೆಟ್‌ಗಳು
11) ಡಿ.ಎಸ್.ಪಿ ವಿಸ್ಕಿ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 4 ಪ್ಯಾಕೆಟ್‌ಗಳು
12) ಖೋಡೇಸ್ ಎಕ್ಸ್ ರಮ್ ಎಂದು ಲೇಬಲ್ ಹಚ್ಚಿದ 180 ಮಿ.ಲಿಯ 8 ಬಾಟಲಿಗಳು
13) ಯು.ಬಿ ಬಿಯರ್ ಎಂದು ಲೇಬಲ್ ಹಚ್ಚಿದ 330 ಮಿ.ಲಿಯ 14 ಬಾಟಲಿಗಳು
14) ಕಿಂಗ್ ಫಿಷರ್ ಬಿಯರ್ ಎಂದು ಲೇಬಲ್ ಹಚ್ಚಿದ 330 ಮಿ.ಲಿಯ 18 ಬಾಟಲಿಗಳು

ಮೇಲಿನ ಮದ್ಯಗಳಲ್ಲಿ ಐದು ಕಟ್ಟುಗಳು ಮನೆಯಲ್ಲಿದ್ದವು, ಸ್ದಳೀಯ ಸಾಕ್ಷಿಗಳಿಗಾಗಿ ಅಕ್ಕ ಪಕ್ಕದವರನ್ನು ವಿಚಾರಿಸಲಾಗಿ ಯಾರೂ ಮುಂದೆ ಬಾರದ ಕಾರಣ ಹಾಜರಿದ್ದ ಇಲಾಖಾ ಸಿಬ್ಬಂಧಿಗಳನ್ನೇ ಪಂಚರನ್ನಾಗಿರಿಸಿಕೊಂಡು ಸ್ದಳ ಮಹಜರು ನಡೆಸಿ ಅಂಗಳದಲ್ಲಿದ್ದ ಸ್ಕೂಟರನ್ನು ಪರಿಶೀಲಿಸಲಾಗಿ ಅದು ನೀಲಿ ಬಣ್ಣದ ಬಜಾಜ್ ಚೇತಕ್ ಸ್ಕೂಟರಾಗಿದ್ದು, ನೊಂದಣಿ ಸಂ:KA-21-E-8107 ಆಗಿದ್ದು, ಸ್ಕೂಟರಿನಲ್ಲಿ ಯಾವುದೇ ದಾಖಲೆಗಳು ಇರುವುದಿಲ್ಲ. ಹಾಗೂ ಸ್ಕೂಟರಿನಲ್ಲಿ ದೊರೆತ ಮೈಸೂರು ಲ್ಯಾನ್ಸರ್ ವಿಸ್ಕಿಯ 180 ಮಿಲಿಯ 28 ಬಾಟಲಿಗಳನ್ನು ರಾಸಯನಿಕ ಪರೀಕ್ಷೆಗಾಗಿ ತೆಗೆದು ಬಟ್ಟೆ ದಾರ ಕಟ್ಟಿ ಇಲಾಖಾ ಸೀಲು ಮಾಡಲಾಯಿತು. ನಂತರ ಮನೆಯ ಒಳಗಿದ್ದ ಮದ್ಯ ಹಾಗೂ ಬಿಯರಿನಿಂದ ತಲಾ ಒಂದೊಂದರಂತೆ 16 ಬಾಟಲಿಗಳನ್ನು ರಾಸಾಯನಿಕ ಪರೀಕ್ಷೆಗೆ ತೆಗೆದು ಇಲಾಖಾ ಸೀಲು ಮಾಡಲಾಯಿತು. ಮಾದರಿ ಮೊಹರನ್ನು ತಯಾರಿಸಿ ಮೇಲೆ ತಿಳಿಸಿದ

ವಿಳಾಸದಂತೆ ಆರೋಪಿಯ ಹೆಸರನ್ನು ಗುರುತು ಚೀಟಿ ತಯಾರಿಸಿ ಎಲ್ಲಾ ಮಾದರಿ ಸೀಸೆಗಳಿಗೆ ಮತ್ತು ಮದ್ಯದ ಕಟ್ಟುಗಳಿಗೆ ಅಂಟಿಸಲಾಯಿತು. ನಂತರ ಮದ್ಯವನ್ನು ಎಲ್ಲಿಂದ ಯಾತಕ್ಕಾಗಿ ತಂದೆ ಎಂದು ವ್ಯಕ್ತಿ ಯನ್ನು ವಿಚಾರಿಸಲಾಗಿ ಚುನಾವಣಾ ಸಂದರ್ಭದಲ್ಲಿ ಎಲ್ಲಾ ಮದ್ಯದ ಅಂಗಡಿಗಳನ್ನು ಮುಚ್ಚಿರುವುದರಿಂದ ಸದ್ರಿ ಮದ್ಯವನ್ನು ಹೆಚ್ಚಿನ ಬೆಲೆಗೆ ಮಾರಾಟ ಮಾಡಲು ತಂದಿಟ್ಟಿರುವುದಾಗಿ ತಿಳಿಸಿದನು. ಗೋವಾ ರಾಜ್ಯದಿಂದ ಮದ್ಯವನ್ನು ತಾನೇ ತಂದಿರುವುದಾಗಿ ತಿಳಿಸಿದನು. ಸದ್ರಿ ಸ್ಕೂಟರ್ ತನ್ನ ಗೆಳೆಯನದ್ದಾಗಿದ್ದು ಮದ್ಯ ಸಾಗಾಣಿಕೆ ಮಾಡಲು ಅದನ್ನು ಉಪಯೋಗಿಸುತ್ತಿದ್ದೆನು ಎಂದು ತಿಳಿಸಿದನು. ಮಹಜರಿನ ಆದಾರದಲ್ಲಿ ದೊರೆತ ಸೊತ್ತುಗಳನ್ನು ವಶಪಡಿಸಿಕೊಂಡು ಅರೋಪಿಗಳನ್ನು ದಸ್ತಗಿರಿ ಮಾಡಲಾಯಿತು.ಮಹಜರು ಪ್ರತಿಯನ್ನು ನೋಡಿ ಅದನ್ನು ನಿಶಾನೆ ಪಿ–1 ಎಂದೂ ಅದರ ಮೇಲಿನ ಸಹಿಯನ್ನು ನಿಶಾನೆ ಪಿ–1 ಎ ಎಂದೂ ಗುರುತಿಸಲಾಯಿತು. ನಂತರ ಕಛೇರಿಗೆ ಬಂದು ಕ್ರೈಂ ಸಂ:3/2009–10ರಂತೆ ಮೊಕದ್ದಮೆ ದಾಖಲಿಸಿಕೊಂಡು ಅರೋಪಿಯನ್ನು ಮತ್ತು ದಾಖಲೆಗಳನ್ನು ಮಾನ್ಯ ಜೆ.ಎಂ.ಎಫ್.ಸಿ. 3ನೇ ನ್ಯಾಯಾಲಯ, ಮಂಗಳೂರು ಇವರ ಮುಂದೆ ಹಾಜರುಪಡಿಸಿ ಆರೋಪಿಯನ್ನು ನ್ಯಾಯಾಂಗ ಬಂಧನಕ್ಕೆ ಒಳಪಡಿಸಿ ಜಿಲ್ಲಾ ಕಾರಗೃಹಕ್ಕೆ ಹಸ್ತಾಂತರಿಸಲಾಯಿತು. ಪ್ರಕರಣಕ್ಕೆ ಸಂಬಂಧಿಸಿದ ಪ್ರಥಮ ಮಾಹಿತಿ ವರದಿಯನ್ನು ನೋಡಿ ನಿಶಾನೆ ಪಿ–2 ಎಂದೂ,ಅದರ ಮೇಲಿನ ಸಹಿಯನ್ನು ನಿಶಾನೆ ಪಿ–2ಎ ಎಂದೂ ಗುರುತಿಸಲಾಯಿತು. ಪ್ರಕರಣದ ತನಿಖೆಯನ್ನು ಕೈಗೊಂಡು ವಾಹನದ ಬಿ ರಿಜಿಸ್ಟ್ರಾರ್ ಎಕ್ಸ್ ಟ್ರಾಕ್ಟ್ ವರದಿಯನ್ನು ಕೋರಿ ಪ್ರಾ.ಸಾ.ಅ ಮಂಗಳೂರು ಇವರಿಗೆ ಪತ್ರ ಬರೆದು ದಿನಾಂಕ:03.02.2009ರಂದು ಬಿ ಎಕ್ಸ್ ಟ್ರಾಕ್ಟ್ ವರದಿ ಪಡೆಯಲಾಯಿತು. ಸದ್ರಿ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯ ಪ್ರಕಾರ ಶ್ರೀ ನಜೀರ್ ಅಹ್ಮದ್ ಬಿನ್:ಅಬುಬ್ಬಕರ್, ಹೌಸ್ ನಂ:10–24/10/52/C ಬಂದರು ಮಂಗಳೂರು ಇವರು ವಾಹನದ ಮಾಲಿಕರೆಂದು ತಿಳಿದುಬಂತು. ಬಿ ಎಕ್ಸ್ ಟ್ರಾಕ್ಟ್ ವರದಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಅದನ್ನು ನೋಡಿ ನಿಶಾನೆ ಪಿ–3 ಎಂದೂ ಗುರುತಿಸಲಾಯಿತು. ಮದ್ಯದ ಮಾದರಿಗಳನ್ನು ಜರ್ನಾಧನ ಅಬಕಾರಿ ರಕ್ಷಕ ಇವರ ಮುಖಾಂತರ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಲ್ಲಿಗೆ ಕಳುಹಿಸಿ ದಿನಾಂಕ:22.06.2009 ರಂದು ರಸಾಯನಿಕ ವಿಶ್ಲೇಷಣಾ ವರದಿ ಮತ್ತು ಮಾದರಿ ಸೀಸೆಯನ್ನು ಪಡೆಯಲಾಯಿತು. ಸದ್ರಿ ಮಾದರಿ ವರದಿಯಲ್ಲಿ ಮಾದರಿಗಳಲ್ಲಿ ಮದ್ಯಸಾರದ ಅಂಶ ಇರುವುದು ಕಂಡು ಬಂದಿರುತ್ತದೆ. ರಾಸಾಯನಿಕ ವಿಶ್ಲೇಷಣಾ ವರದಿಯ ಪ್ರತಿಯನ್ನು ಪ್ರಾಧಿಕಾರಕ್ಕೆ ಹಾಜರುಪಡಿಸಿ ಅದನ್ನು ನೋಡಿ ನಿಶಾನೆ ಪಿ–4 ಎಂದು ಗುರುತಿಸಲಾಯಿತು. ನಂತರ ತನಿಖೆ ಮುಂದುವರಿಸಿ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ಪ್ರಕಾರ ನಮೂದಿಸಿರುವ ವಾಹನದ ಮಾಲೀಕರಾದ ಶ್ರೀ ನಜೀರ್ ಅಹ್ಮದ್ ಬಿನ್ ಅಬುಬ್ಬಕರ್, ಹೌಸ್ ನಂ:10–24/10/52/C ಬಂದರು ಮಂಗಳೂರು ಇವರನ್ನು ಖುದ್ದಾಗಿ ಸಂಪರ್ಕಿಸಿ ಅಪರಾಧ ದಾಖಲಾಗಿರುವ ಬಗ್ಗೆ ವಿಚಾರಿಸಿದಾಗ ಸದ್ರಿ ಸ್ಕೂಟರನ್ನು ಮ್ಯಾಕಿಯಂ ಡಿಸಿಲ್ವಾ ಎಂಬವರಿಗೆ ಮಾರಾಟ ಮಾಡಿರುವುದಾಗಿ ತಿಳಿಸಿರುತ್ತಾರೆ. ಸದ್ರಿ ಮ್ಯಾಕಿಯಂ ಡಿಸಿಲ್ವಾ ಎಂಬವರು ಪ್ರಕರಣದಲ್ಲಿ ಮುಖ್ಯ ಆರೋಪಿಯಾಗಿದ್ದು ಆರೋಪಿತ ವ್ಯಕ್ತಿಯು ಉದ್ದೇಶಿತ ಪೂರ್ವಕವಾಗಿ ಸದ್ರಿ ವಾಹನವನ್ನು ಅಕ್ರಮ ಸಾಗಾಟಕ್ಕೆ ಬಳಸಿಕೊಂಡಿರುವುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಮೇಲಿನ ಎಲ್ಲಾ ಕಾರಣಗಳನ್ನು ಗಮನಿಸಿ ಪ್ರಕರಣದಲ್ಲಿ ಜಪ್ತಾದ ವಾಹನ ಸಮೇತ ಎಲ್ಲಾ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಶಿಫಾರಸ್ಸು ಮಾಡಿ ಪ್ರಸ್ತಾವನೆಯನ್ನು ದಿನಾಂಕ:27.06.2009 ರಂದು ಅಧಿಕೃತ ಅಧಿಕಾರಿಗಳಿಗೆ ಸಲ್ಲಿಸಿರುತ್ತೇನೆ. ಸದ್ರಿ ವರದಿಯನ್ನು ಈಗ ನೋಡಿ ನಿಶಾನೆ ಪಿ–5 ಎಂದು ಗುರುತಿಸಲಾಯಿತು ಎಂದು ಸಾಕ್ಷ್ಯವನ್ನು ನುಡಿದಿರುತ್ತಾರೆ.

ವಾಹನದ ಮಾಲೀಕರಾಗಲೀ, ಮಾಲೀಕರ ಪರ ವಕೀಲರಾಗಲೀ ಪ್ರಾಧಿಕಾರದ ಮುಂದೆ ಹಾಜರಾಗದೆ ಇರುವುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಲಾಗುತ್ತದೆ.

ಈ ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಹಾಗೂ ಪ್ರಕರಣದಲ್ಲಿ ಜಪ್ತು ಪಡಿಸಿಕೊಂಡ ಅಕ್ರಮ ಸೊತ್ತುಗಳು ಮದ್ಯ ಮತ್ತು ಬಿಯರ್ ಎಂದು ರಸಾಯನಿಕ ವಿಶ್ಲೇಷಕರು ನೀಡಿದ ವರದಿಯಿಂದ ತಿಳಿದು ಬಂದಿದ್ದು ಹಾಗೂ ಸದ್ರಿ ಸೊತ್ತುಗಳನ್ನು ಸಾಗಾಟ ಮಾಡಿದ ಬಗ್ಗೆ ಯಾವುದೇ ರಹದಾರಿ ಪತ್ರವಿಲ್ಲದೇ ಇರುವುದರಿಂದ ವಾಹನ ನೊಂದಣಿ ಸಂ:KA-21-E-8107 ಸ್ಕೂಟರ್ ವಾಹನದಲ್ಲಿ ಅಕ್ರಮವಾಗಿ ಮದ್ಯ ಮತ್ತು ಬಿಯರ್ ಸಾಗಾಣಿಕೆಯಾಗಿರುವುದು ಸಾಭೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ.

ಸದರಿ ವಾಹನವನ್ನು ವಶಪಡಿಸಿಕೊಂಡು ಸುಮಾರು 2 ತಿಂಗಳಿಗಿಂತಲೂ ಹೆಚ್ಚು ಸಮಯ ಕಳೆದರೂ ತಕ್ಷೀರಿನಲ್ಲಿ ದಸ್ತಗಿರಿಯಾದ ಆರೋಪಿ ಅಥವಾ ವಾಹನದ ಆರ್.ಸಿ. ಮಾಲೀಕರು ವಾಹನಕ್ಕೆ ಸಂಬಂಧಿಸಿ ವಾಹನದ ಮಾಲೀಕತ್ವವನ್ನು ಕೋರಿ ಸಂಬಂಧಪಟ್ಟ ದಾಖಲೆಗಳನ್ನು ಹಾಜರುಪಡಿಸಿರುವುದಿಲ್ಲ. ಹಾಗೂ ವಾಹನದ ಮಾಲಿಕತ್ವವನ್ನು ತಿಳಿದುಕೊಳ್ಳುವರೇ ಏಕೈಕ ಮಾರ್ಗವಾದ ಬಿ ರಿಜಿಸ್ಟ್ರಾರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ಪಡೆದು, ಸದ್ರಿ ಬಿ.ವರದಿಯಲ್ಲಿ ನಮೂದಿಸಿದ ನೊಂದಣಿ ಮಾಲೀಕರಿಗೆ ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳಿ ನೋಟೀಸಿಗೆ ಸದ್ರಿ ನೊಂದಣೀ ಮಾಲೀಕರು ತನ್ನ ವಾಹನವನ್ನು ಸುಮಾರು 6 ತಿಂಗಳ ಮೊದಲೇ ಪ್ರಕರಣದ ಮುಖ್ಯ ಆರೋಪಿತ ವ್ಯಕ್ತಿಗೆ ಮಾರಾಟ ಮಾಡಿರುವುದಾಗಿ ತಿಳಿಸಿ, ಸದ್ರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವರೇ ತನ್ನಿಂದ ಯಾವುದೇ

ಅಭ್ಯಂತರವಿಲ್ಲವೆಂದು ತಿಳಿಸಿರುವುದನ್ನು ಗಮನಿಸಿದಾಗ ಪ್ರಕರಣದ ಆರೋಪಿತ ವ್ಯಕ್ತಿಯು ಸದ್ರಿ ವಾಹನವನ್ನು ಪಡೆದುಕೊಂಡು ತನ್ನ ತಿಳುವಳಿಕೆಯಿಂದಲೇ ಅಕ್ರಮ ಮದ್ಯ ಹಾಗೂ ಬೀರ್ ಸಾಗಾಣಿಕೆಗೆ ಬಳಸಿರುವುದು ಕಂಡು ಬರುತ್ತದೆ.

ಅಲ್ಲದೆ ವಾಹನ ಮತ್ತು ಜಪ್ತು ಪಡಿಸಲಾದ ಇತರ ಸೊತ್ತುಗಳನ್ನು ತನ್ನ ಸುಪರ್ದಿಗೆ ಪಡೆಯಲು ಮತ್ತು ತಕ್ಷೀರನ್ನು ನಡೆಸಲು ಯಾರೊಬ್ಬರೂ ಉತ್ಸುಕರಿಲ್ಲದಿರುವುದನ್ನು ಪ್ರಾಧಿಕಾರವು ಮನಗಂಡು ಅಕ್ರಮ ಮದ್ಯ ಹಾಗೂ ಬೀರ್ ಸಾಗಾಣಿಕೆಗೆ ಬಳಸಿದ ಸ್ಕೂಟರ್ ಸಂ:KA-21-E-8107 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಹಾಗೂ ಯೋಗ್ಯವೆಂದು ತೀರ್ಮಾನಿಸಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965ರ ಕಾಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಾಲಂ 43 ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ–1, ಮಂಗಳೂರು ಇವರ ತಕ್ಷೀರು ಸಂಖ್ಯೆ: 3/2009–10 ದಿನಾಂಕ:25.04.2009 ರಲ್ಲಿ ಜಪ್ತುಪಡಿಸಿದ ವಾಹನ ಸ್ಕೂಟರ್ ಸಂ:KA-21-E-8107 (ಚಾಸೀಸ್ ನಂ:06FBED94126 ಮತ್ತು ಇಂಜಿನ್ ಸಂ: 35MBED43538) ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43ಸಿ ಯಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:17.07.2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹ್ಮಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

**ಪ್ರಾ.ಸಾ–I:** ಶ್ರೀ ಕೆ.ಮೋಹನ್ ರಾವ್,
ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ–1, ಮಂಗಳೂರು.

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | |
|---|---|
| ನಿಶಾನೆ ಪಿ–I | : ಮಹಜರು ಪತ್ರಿ |
| ನಿಶಾನೆ ಪಿ–Iಎ | : ಅದರ ಮೇಲಿನ ಸಹಿ |
| ನಿಶಾನೆ ಪಿ–2 | : ಪ್ರಥಮ ವರ್ತಮಾನ ವರದಿ |
| ನಿಶಾನೆ ಪಿ–2ಎ | : ಅದರ ಮೇಲಿನ ಸಹಿ |
| ನಿಶಾನೆ ಪಿ–3 | : ಬಿ ಎಕ್ಸ್‌ಟ್ರಾಕ್ಟ್ ವರದಿ |
| ನಿಶಾನೆ ಪಿ–4 | :ರಾಸಾಯನಿಕ ವಿಶ್ಲೇಷಣಾ ವರದಿ |
| ನಿಶಾನೆ ಪಿ–5 | : ತನಿಖಾ ವರದಿ |

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

**ಅರ್ಜಿದಾರರ ಹೇಳಿಕೆ** – ಯಾವುದು ಇಲ್ಲ–

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು :** – ಯಾವುದು ಇಲ್ಲ–

**ನೂರ್ ಮಹ್ಮಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.735

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ, ಮಂಗಳೂರು ಇವರ ನ್ಯಾಯಾಲಯದಲ್ಲಿ**

**ನಂ:ಎಸ್‌ಡಿಕೆ/385/ಡಿಟಿಸಿಆರ್/2008–09, ದಿನಾಂಕ:17ನೇ ಜುಲೈ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್

ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿ:** |
|---|---|
| ಅಬಕಾರಿ ಉಪ ನಿರೀಕ್ಷಕರು (2), ಮಂಗಳೂರು ಉಪ ವಿಭಾಗ–2, ಮಂಗಳೂರು. | ನೌಷಾದ್,ಬಿನ್:ದಿ:ಮ್ಯೊದು,ಪೆರ್ಮುದೆ ಮನೆ, ಪಯ್ಯಳಿಕೆ ಗ್ರಾಮ, ಕಾಸರಗೋಡು ಜಿಲ್ಲೆ, ಕೇರಳ ರಾಜ್ಯ. ಮತ್ತು ಇತರ 4 ಆರೋಪಿಗಳು. |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು(2),ಮಂಗಳೂರು ದಕ್ಷಿಣ ವಲಯ–2, ಮಂಗಳೂರು ಇವರು ದಿನಾಂಕ:14.05.2009 ರಂದು ಪಂಚರು ಮತ್ತು ಸಿಬ್ಬಂದಿಯವರೊಂದಿಗೆ ಮಂಗಳೂರು ತಾಲ್ಲೂಕು ಬೆಳ್ಮ ಗ್ರಾಮದ ನಾಟೆಕಲ್ ಸರ್ಕಲ್ ಬಳಿ ಮಂಗಳೂರು ಹಾಗೂ ಕೊಣಾಜೆ ಬದಿಯಿಂದ ಮಂಜನಾಡಿ ಮೂಲಕ ಕೇರಳ ಕಡೆಗೆ ಹೋಗುವ ವಾಹನಗಳನ್ನು ತಪಾಸಣೆ ಮಾಡುತ್ತಿದ್ದ ಸಂದರ್ಭ ಸುಮಾರು ಸಾಯಂಕಾಲ 6–30 ಗಂಟೆ ಸಮಯದಲ್ಲಿ ಮಂಗಳೂರು ಕಡೆಯಿಂದ ಭಾರವಾದ ವಸ್ತುಗಳನ್ನು ಹೇರಿಕೊಂಡು ಚಾಲಕ ಮಾತ್ರ ಇರುವ ಒಂದು ಬಿಳಿ ಬಣ್ಣದ ಮಾರುತಿ ಆಲ್ಟೋ ಕಾರು ಬರುವುದು ಕಂಡು ಬಂದು, ತಪಾಸಣೆ ಮಾಡುವ ಉದ್ದೇಶಕ್ಕಾಗಿ ಅದನ್ನು ನಿಲ್ಲಿಸಲು ಸನ್ನೆ ಮಾಡಿದಾಗ ಚಾಲಕನು ವಾಹನವನ್ನು ನಿಲ್ಲಿಸದೇ ತಪ್ಪಿಸಿಕೊಳ್ಳುವ ಸಲುವಾಗಿ ಮಂಜನಾಡಿ ರಸ್ತೆ ಮೂಲಕ ಓಡಿಸಿದಾಗ ತಕ್ಷಣ ಅನುಮಾನಗೊಂಡು, ಸದ್ರಿ ವಾಹನವನ್ನು ಬೆನ್ನಟ್ಟಿ ನಾಟೆಕಲ್ ಸರ್ಕಲ್‌ನಿಂದ ಎರಡು ಫರ್ಲಾಂಗ್ ದೂರದಲ್ಲಿ ತಡೆದು ನಿಲ್ಲಿಸಿ ನೋಡಲಾಗಿ ಅದು KL-19N-7269 ಸಂಖ್ಯಾ ಫಲಕವನ್ನು ಹೊಂದಿದ್ದ ಮಾರುತಿ ಕಂಪೆನಿಯ ಆಲ್ಟೋ ಕಾರು ಆಗಿದ್ದು, ಕಾರಿನಲ್ಲಿದ್ದ ಚಾಲಕನನ್ನು ಕೆಳಗಿಳಿಸಿ ವಿಚಾರಿಸಲಾಗಿ ಕಾರಿನಲ್ಲಿ ಸಾರಾಯಿ ಸ್ಯಾಚೆಟುಗಳು ಇರುವುದಾಗಿ, ಸದರಿ ಸಾರಾಯಿ ಸ್ಯಾಚೆಟ್‌ಗಳನ್ನು ಮೋಹನ,ಎಲಿಯಾರ್ ಪದವು ಹಾಗೂ ಬ್ರಿಜೇಶ್, ಚೆಂಬುಗುಡ್ಡೆ ಎಂಬವರು ಕಾರಿಗೆ ಲೋಡ್ ಮಾಡಿರುವುದಾಗಿಯೂ, ಸದರಿ ಸಾರಾಯಿ ಸ್ಯಾಚೆಟ್‌ಗಳನ್ನು ಪ್ರವೀಣ, ಮೀಯಪದವು ಮತ್ತು ಜಯರಾಮ, ಕುಂಜತ್ತೂರು ಇವರ ಪರವಾಗಿ ಮೀಯಪದವು ಎಂಬಲ್ಲಿಗೆ ಯಾವುದೇ ರಹದಾರಿ ಇಲ್ಲದೇ ಕೊಂಡು ಹೋಗುವುದಾಗಿ ತಿಳಿಸಿದನು. ನಂತರ ಹೀಗೆ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಿಸುವುದು ಕಾನೂನು ಬಾಹಿರ ಎಂದು ಆತನಿಗೆ ತಿಳಿಸಿ, ಸದ್ರಿ ಕಾರನ್ನು ಶೋಧನೆ ನಡೆಸುವರೇ ಶೋಧನಾ ವಾರೆಂಟ್‌ನ್ನು ಮಾನ್ಯ ನ್ಯಾಯಾಲಯದಿಂದ ಪಡೆಯಲು ಸಮಯಾವಕಾಶ ಇಲ್ಲದೇ ಇರುವ ಕಾರಣ ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 54 ರಲ್ಲಿ ದತ್ತವಾದ ಅಧಿಕಾರದ ಪ್ರಕಾರ ಸರ್ಚ್ ವಾರೆಂಟನ್ನು ತಯಾರಿಸಿ, ಕಾರಿನ ಶೋಧನೆ ನಡೆಸಲಾಗಿ ಕಾರಿನ ಚಾಲಕನ ಸೀಟಿನ ಹಿಂಬದಿಯಲ್ಲಿ 14 ಬಿಳಿ ನೈಲಾನ್ ಚೀಲದ ಕಟ್ಟುಗಳಲ್ಲಿ ಒಟ್ಟು 7000 ಸಾರಾಯಿ ಸ್ಯಾಚೆಟ್‌ಗಳು ಇರುವುದನ್ನು ಪತ್ತೆಹಚ್ಚಿ ಇದು ಅಬಕಾರಿ ಕಾಯಿದೆಯಂತೆ ಅಪರಾಧವೆಂದು ತಿಳಿಸಿ, ಮಾರುತಿ ಆಲ್ಟೋ ಕಾರ್ ಸಂ:KA-19N-7269 ಮತ್ತು 7000 ಸಾರಾಯಿ ಸ್ಯಾಚೆಟ್‌ಗಳನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಚಾಲಕನಾದ ನೌಷಾದ್, ಬಿನ್ ದಿ:ಮ್ಯೊದು, ಪೆರ್ಮುದೆ ಮನೆ, ಪಯ್ಯಳಿಕೆ ಗ್ರಾಮ, ಕಾಸರಗೋಡು ಜಿಲ್ಲೆ, ಕೇರಳ ರಾಜ್ಯ ಆತನನ್ನು ದಸ್ತಗಿರಿ ಮಾಡಿ, ನಂತರ ಕಾರಿನಲ್ಲಿ ದೊರೆತ ಸಾರಾಯಿಯ ಪ್ರತಿ ಚೀಲದಿಂದ ತಲಾ 10ರ ಒಂದು ಕಟ್ಟಿನಂತೆ ಒಟ್ಟು 14 ಕಟ್ಟುಗಳನ್ನು ತಯಾರಿಸಿ ರಾಸಾಯನಿಕ ಪರೀಕ್ಷೆಗಾಗಿ ಮಾದರಿ ತೆಗೆದು ಇಲಾಖಾ ಸೀಲ್‌ನಿಂದ ಸೀಲ್ ಮಾಡಿ, ಸದರಿ ಸೊತ್ತುಗಳನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಮಹಜರನ್ನು ಸ್ಥಳದಲ್ಲಿಯೇ ಬರೆದು, ಇದು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಲಂ 11, ಮತ್ತು 13 ರಂತೆ ಅಪರಾಧವಾಗಿದ್ದು, ಕಲಂ 32 ಮತ್ತು 38(ಎ) ರಂತೆ ಶಿಕ್ಷಾರ್ಹವಾಗಿರುವುದರಿಂದ, ದಸ್ತಗಿರಿಯಾದ ಆರೋಪಿಯ ವಿರುದ್ಧ ತಕ್ಲೀರು ಸಂ:3/2009–10 ದಿನಾಂಕ:14.05.2009 ರಂತೆ ಪ್ರಕರಣವನ್ನು ನೋಂದಾಯಿಸಿ ಪ್ರಥಮ ಮಾಹಿತಿ ವರದಿಯನ್ನು ಮಾನ್ಯ ನ್ಯಾಯಾಲಯಕ್ಕೆ ಒಪ್ಪಿಸಿ, ಅರೋಪಿಯನ್ನು ನ್ಯಾಯಾಲಯಕ್ಕೆ ಒಪ್ಪಿಸಿ ನಂತರ ಪ್ರಕರಣದ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

**ಜಪ್ತುಪಡಿಸಿಕೊಂಡ ಸೊತ್ತುಗಳು:**

1) ಮಾರುತಿ ಆಲ್ಟೋ ಕಾರು ನೊಂದಣಿ ಸಂಖ್ಯೆ: KA-19N-7269

2) 14 ಬಿಳಿ ನೈಲಾನ್ ಚೀಲಗಳಲ್ಲಿ ಮೈಸೂರು ಶುಗರ್ ಕಂಪೆನಿ ಎಂದು ನಮೂದಿಸಿದ 100 ಮಿಲಿಯ ತಲಾ 500 ಸ್ಯಾಚೆಟ್‌ಗಳಂತೆ ಒಟ್ಟು 7000 ಸಾರಾಯಿ ಸ್ಯಾಚೆಟ್‌ಗಳು.

ಪ್ರಕರಣದ ತನಿಖೆಯನ್ನು ಕೈಗೊಂಡ ಅಬಕಾರಿ ಉಪ ನಿರೀಕ್ಷಕರು(2), ಮಂಗಳೂರು ದಕ್ಷಿಣ ವಲಯ–2, ಮಂಗಳೂರು ಇವರು ಜಪ್ತುಪಡಿಸಿಕೊಂಡ ವಾಹನ ಸಂಖ್ಯೆ:KA-19N-7269 ರ ಕಾರಿನ 'ಬಿ' ಎಕ್ಸ್‌ಟ್ರಾಕ್ಟ್ ವರದಿಯನ್ನು ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ಇವರಿಂದ ಪಡೆದು ದಿನಾಂಕ:21.05.2009 ರಂದು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಸದರಿ ಸ್ವೀಕರಿಸಲಾದ ಬಿ.ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ವಾಹನದ ಚಾಸಿಸ್ ನಂ.MA3EYD81

S0014113351 ಮತ್ತು ಇಂಜಿನ್ ಸಂ:F8DN4026788ರಂತೆ ಇದ್ದು, ಜಪ್ತುಪಡಿಸಿದ ವಾಹನದ ಚಾಸಿಸ್ ಸಂ: MA3EYD81500-326063B4 ಮತ್ತು ಇಂಜಿನ್ ಸಂ:RL6C705151 ಆಗಿದ್ದು, ಜಪ್ತು ಪಡಿಸಿದ ವಾಹನಕ್ಕೂ 'ಬಿ' ಎಕ್ಸ್‌ಟ್ರಾಕ್ಟ್ ವರದಿಗೂ ಒಂದಕ್ಕೊಂದು ತಾಳೆ ಕಂಡುಬಂದಿರುವುದಿಲ್ಲ. ಆದಾಗ್ಯೂ 'ಬಿ' ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ನಮೂದಿಸಿರುವ ವಾಹನದ ಮಾಲೀಕರಾದ ಡಾ:ಉದಯ್‌ಕುಮಾರ್, ಬಿನ್ ಆರ್.ಬಿ. ಯರಾಗಳ್ಳಿ, ಎ ಆರ್–14, ಕೆ.ಆರ್.ಇ.ಸಿ ಕ್ಯಾಂಪಸ್ ಶ್ರೀನಿವಾಸ ನಗರ ಅಂಚೆ, ಸುರತ್ಕಲ್, ಮಂಗಳೂರು ಇವರಿಗೆ ಪ್ರಾಧಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965ರ ಸೆಕ್ಷನ್ 43ಬಿ ಪ್ರಕಾರ ಕಾರಣ ಕೇಳುವ ನೋಟೀಸನ್ನು ದಿನಾಂಕ:22.06.2009 ರಂದು ನೊಂದಣಿ ಅಂಚೆ ಮೂಲಕ ಹಾಗೂ ಪ್ರಕರಣದ ತನಿಖಾಧಿಕಾರಿಗಳ ಮೂಲಕ ಜಾರಿ ಮಾಡಲು ನೀಡಲಾಗಿದ್ದು, ಸದ್ರಿ ನೋಟೀಸಿಗೆ ಡಾ.ಉದಯ್ ಕುಮಾರ್. ಆರ್.ವೈ, B.Tech, M.Tech, Ph.D., Professor and Head, Dept. of Electrical & Electronics Engineering ,N.I.T.K, Surathkal, Mangalore ಇವರು ದಿನಾಂಕ:24.06.2009 ರಂದು ಪ್ರಾಧಿಕಾರಕ್ಕೆ ಲಿಖಿತ ಉತ್ತರ ನೀಡಿ ನೊಂದಣಿ ಸಂಖ್ಯೆ: KA-19N-7269 ಇರುವ ಮಾರುತಿ ಕಂಪೆನಿಯ ಆಲ್ಟೋ ಕಾರು ಈಗಲೂ ನನ್ನ ಸ್ವಾಧೀನದಲ್ಲಿದ್ದು, ಸದ್ರಿ ಕಾರು ಯಾವುದೇ ಅಕ್ರಮದಲ್ಲಿ ಒಳಗೊಂಡಿರುವುದಿಲ್ಲ. ಹಾಗೂ ನನ್ನ ಕಾರಿನ ನಂಬರ್ ಪ್ಲೇಟನ್ನು ಹೋಲುವ ನಕಲಿ ನಂಬರ್ ಪ್ಲೇಟನ್ನು ಅಳವಡಿಸಿ ಯಾರೋ ಈ ಕೃತ್ಯವನ್ನು ಎಸಗಿರಬೇಕೆಂದು ತಿಳಿಸಿ, ನನ್ನನ್ನು ಸದ್ರಿ ಮೊಕದ್ದಮೆಯಿಂದ ಕೈಬಿಡಬೇಕಾಗಿ ಕೋರಿರುತ್ತಾರೆ.

ಪ್ರಕರಣದ ತನಿಖೆಯನ್ನು ಮುಂದುವರಿಸಿದ ಅಬಕಾರಿ ಉಪ ನಿರೀಕ್ಷಕರು(2), ಮಂಗಳೂರು ದಕ್ಷಿಣ ವಲಯ–2, ಮಂಗಳೂರು ಇವರು ಪ್ರಕರಣದಲ್ಲಿ ಜಪ್ತುಪಡಿಸಿಕೊಂಡ ಸಾರಾಯಿ ಸ್ಯಾಚೆಟ್‌ಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ, ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ವಲಯ ಇವರ ರಾಸಾಯನಿಕ ವಿಶ್ಲೇಷಣಾ ವರದಿ ಸಂ:ಇ–192–140, ದಿನಾಂಕ:07.06.2009ರ ಪ್ರತಿಯನ್ನು ದಿನಾಂಕ:20.06.2009ರ ವರದಿಯೊಂದಿಗೆ ಲಗತ್ತಿಸಿ ಪ್ರಾಧಿಕಾರಕ್ಕೆ ಕಳುಹಿಸಿಕೊಡುತ್ತಾ ಸದ್ರಿ ಜಪ್ತಾದ ಸಾರಾಯಿಯಲ್ಲಿ ಮದ್ಯಸಾರದ ಪ್ರಮಾಣ 22.0% ಇರುವುದಾಗಿ ಹಾಗೂ ಕ್ಷೀಣ ಶಕ್ತಿಯ ಪೇಯವೆಂದು ದೃಢೀಕರಿಸಿ ಪತ್ರ ನೀಡಿರುತ್ತಾರೆ ಎಂದು ತಿಳಿಸಿ, ಸದ್ರಿ ಸಾರಾಯಿಯನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಹಾಗೂ ವಾಹನದ ಚಾಸಿಸ್ ನಂಬರ್ ಮತ್ತು ಇಂಜಿನ್ ನಂಬರ್ "ಬಿ" ಎಕ್ಸ್‌ಟ್ರಾಕ್ಟ್ ವರದಿಗೆ ತಾಳೆ ಕಂಡು ಬಾರದೇ ಇರುವುದರಿಂದ ವಾಹನವನ್ನು ಕೂಡಾ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಿಲೇವಾರಿ ಮಾಡಲು ಆದೇಶಕ್ಕಾಗಿ ಶಿಫಾರಸ್ಸು ಮಾಡಿರುತ್ತಾರೆ.

ಅದರಂತೆ ಪ್ರಾದಿಕಾರದ ದಿನಾಂಕ:01.07.2009ರ ಆದೇಶದಲ್ಲಿ ವಾಹನವನ್ನು ಹೊರತು ಪಡಿಸಿ ಜಪ್ತಾದ 100 ಎಂಎಲ್.ನ 7000 ಸಾರಾಯಿ ಸ್ಯಾಚೇಟುಗಳನ್ನು ಸರ್ಕಾರಕ್ಕೆ ಮುಟ್ಟು ಗೋಲು ಹಾಕಿಕೊಂಡು ನಾಶಪಡಿಸಲು ಆದೇಶಿಸಲಾಗಿರುತ್ತದೆ.

ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಮಂಗಳೂರು ಇವರು ನೀಡಿರುವ ವಾಹನದ 'ಬಿ' ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ನಮೂದಿಸಿದ ಇಂಜಿನ್ ಸಂಖ್ಯೆ ಮತ್ತು ಚಾಸಿಸ್ ಸಂಖ್ಯೆಗೂ ಜಪ್ತುಪಡಿಸಿದ ವಾಹನದ ಇಂಜಿನ್ ಸಂಖ್ಯೆ ಮತ್ತು ಚಾಸಿಸ್ ಸಂಖ್ಯೆಗೂ ತಾಳೆ ಕಂಡು ಬಾರದೇ ಇದ್ದು ಹಾಗೂ 'ಬಿ' ಎಕ್ಸ್ ಟ್ರಾಕ್ಟ್ ವರದಿಯಲ್ಲಿ ನಮೂದಿಸಿದ ವಾಹನದ ಮಾಲೀಕರಿಗೆ ನೀಡಲಾದ ಕಾರಣ ಕೇಳಿ ನೋಟೀಸಿಗೆ ಸದ್ರಿಯವರು ನೀಡಿದ ಲಿಖಿತ ಉತ್ತರದಲ್ಲಿ ಸದ್ರಿಯವರ ಒಡೆತನಕ್ಕೆ ಸೇರಿದ ಮಾರುತಿ ಆಲ್ಟೋ ಕಾರು ಸಂ:KA-19N-7269 ಅವರ ಸುಪರ್ದಿಯಲ್ಲಿಯೇ ಇರುವುದೆಂದು ತಿಳಿಸಿರುವುದರಿಂದ, ಅರೋಪಿಗಳು ಪ್ರಕರಣ ಸಂದರ್ಭದಲ್ಲಿ ಅಪರಾಧದಿಂದ ತಪ್ಪಿಸಿಕೊಳ್ಳುವ ಉದ್ದೇಶದಿಂದ ನಕಲಿ ನಂಬರ್ ಪ್ಲೇಟ್ ಅಳವಡಿಸಿ, ಅಕ್ರಮ ಎಸಗಿರುವುದು ಹಾಗೂ ಪ್ರಕರಣ ಸಂಭವಿಸಿ ಈಗಾಗಲೇ ಎರಡು ತಿಂಗಳುಗಳು ಕಳೆದಿದ್ದರೂ ಯಾರೊಬ್ಬರೂ ಒಡೆತನ ನಿರೂಪಿಸಿ ವಾಹನದ ಬಿಡುಗಡೆ ಬಗ್ಗೆ ಪ್ರಯತ್ನಿಸಿರುವುದು ಕಂಡು ಬರುವುದಿಲ್ಲ.

1965 ನೇ ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಪ್ರಕರಣವನ್ನು ದಾಖಲು ಮಾಡುವಾಗ ಆರೋಪಿಯು ಪತ್ತೆಯಾಗದಿದ್ದಲ್ಲಿ ಅಥವಾ ಪತ್ತೆಯಾಗುವ ಸಾಧ್ಯತೆಯಿಲ್ಲದಿದ್ದಲ್ಲಿ, ಪ್ರಕರಣವನ್ನು ಪತ್ತೆ ಹಚ್ಚಿದ ಒಂದು ತಿಂಗಳಲ್ಲಿ ಯಾವುದೇ ವ್ಯಕ್ತಿಯು ಪ್ರಾಧಿಕಾರದ ಮುಂದೆ ಹಾಜರಾಗಿ ಅಪರಾಧದಲ್ಲಿ ಜಪ್ತಾಗಿರುವ ಸೊತ್ತುಗಳು ಮತ್ತು ವಾಹನ ತಮ್ಮದೆಂದು, ಅವುಗಳು ಕಾನೂನುಬದ್ಧವಾಗಿದೆಯೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತುಪಡಿಸದೇ ಇದ್ದಲ್ಲಿ, ಸದರಿ ಸೊತ್ತುಗಳು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43 ರ ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುವ ಸೊತ್ತುಗಳಾಗಿದ್ದಲ್ಲಿ, ಅಂತಹ ಸೊತ್ತುಗಳನ್ನು ಕಾಲಂ 43(ಸಿ) ಅಡಿಯಲ್ಲಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ.

ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲಾತಿಗಳ ಪ್ರಕಾರ ದಿನಾಂಕ:14.05.2009ರಂದು ಮಾರುತಿ ಆಲ್ಟೋ ಕಾರಿಗೆ ನಕಲಿ ನೊಂದಾಣಿ ಸಂಖ್ಯೆ KA-19N-7269 ನ್ನು ಅಳವಡಿಸಿ ಅಕ್ರಮವಾಗಿ ಯಾವುದೇ ಅಧಿಕೃತ ರಹದಾರಿ ಪತ್ರವಿಲ್ಲದೆ ಆರೋಪಿಗಳು ಸಾರಾಯಿಯನ್ನು ಸಾಗಾಣಿಕೆ ಮಾಡುವುದಕ್ಕೆ ಬಳಸಿರುವುದನ್ನು ಪತ್ತೆ ಹಚ್ಚಿ, ಸದ್ರಿ ವಾಹನವನ್ನು ಮತ್ತು ಅಕ್ರಮ ಸೊತ್ತುಗಳನ್ನು ಸ್ಥಳ ಮಹಜರು ಮುಖೇನ ಸ್ವಾಧೀನಪಡಿಸಿದ್ದು ಹಾಗೂ ಜಪ್ತು ಮಾಡಲ್ಪಟ್ಟಿರುವ ವಸ್ತು ರಾಸಾಯನಿಕ ತಜ್ಞರ

ವರದಿಯಂತೆ ಸಾರಾಯಿಯಾಗಿರುವುದು ದೃಢಪಟ್ಟಿದ್ದು ಹಾಗೂ ವಾಹನ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿದ 'ಬಿ' ಎಕ್ಸ್‌ಟ್ರಾಕ್ಟ್ ವರದಿ ಪ್ರಕಾರ ವಾಹನದ ನೊಂದಾಣಿ ಸಂಖ್ಯೆಯಂತೆ ತಿಳಿಸಿರುವ ವಾಹನದ ಇಂಜಿನ್ ಮತ್ತು ಚಾಸೀಸ್ ಸಂಖ್ಯೆ ಒಂದಕ್ಕೊಂದು ತಾಳೆ ಕಂಡು ಬಾರದೇ ಇದ್ದು, ಆರೋಪಿಯು ಉದ್ದೇಶಪೂರ್ವಕವಾಗಿ ವಾಹನಕ್ಕೆ ನಕಲಿ ನಂಬರ್ ಪ್ಲೇಟನ್ನು ಅಳವಡಿಸಿಕೊಂಡು ವಾಹನವನ್ನು ಕರ್ನಾಟಕ ಅಬಕಾರಿ ಕಾನೂನಿನ ಉಲ್ಲಂಘನೆಗಾಗಿ ಬಳಸಿರುವುದು ಸ್ಪಷ್ಟವಾಗಿ ಸಾಬೀತಾಗಿರುವುದರಿಂದ ಈ ಪ್ರಾಧಿಕಾರವು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ತೀರ್ಮಾನ ತೆಗೆದುಕೊಳ್ಳಬೇಕಾಗಿರುತ್ತದೆ.

ಮೇಲಿನ ವಿದ್ಯಾಮಾನಗಳ ಸಂದರ್ಭದಲ್ಲಿ ವಾಹನದ ಮುಟ್ಟುಗೋಲು ನಡವಳಿ ವಿಚಾರಣೆಯನ್ನು ಪ್ರಾರಂಭಿಸಿ ಅಭಿಯೋಗದ ಪರ ಪ್ರಕರಣ ದಾಖಲು ಮಾಡಿರುವ ಓರ್ವ ಸಾಕ್ಷಿದಾರರನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿಯ ಹೇಳಿಕೆಯನ್ನು ಪಡೆಯಲಾಗಿರುತ್ತದೆ. ಪ್ರತಿರಕ್ಷಾ ಸಾಕ್ಷಿಗಳು ಹಾಜರಾಗದೇ ಇದ್ದುದರಿಂದ ಪ್ರತಿರಕ್ಷಾ ಸಾಕ್ಷಿಗಳ ಹೇಳಿಕೆಯನ್ನು ಪಡೆಯಲಾಗಿರುವುದಿಲ್ಲ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಗದ ಪರ ಸಲ್ಲಿಸಿರುವ ಸಾಕ್ಷ್ಯಾಧ್ಯಾರಗಳಿಂದ ಈ ಕೆಳಗಿನ ವಿವಾಧಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ

1. ದಿನಾಂಕ:14.05.2009 ರಂದು ಸಂಖ್ಯೆ: KA-19N-7269 ಮಾರುತಿ ಆಲ್ಟೋ ಕಾರು ಇದನ್ನು ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಾಣಿಕೆ ಮಾಡಲು ಬಳಸಲಾಗಿದೆಯೇ?
2. ವಶಪಡಿಸಿಕೊಂಡಿರುವ ವಾಹನದ ಮಾಲೀಕ ತಾನೆಂದು, ತನಗೆ ತಿಳಿಯದೇ ಅಕ್ರಮ ಸಾರಾಯಿ ಸ್ಯಾಚೆಟ್ ಸಾಗಾಣಿಕೆಗೆ ವಾಹನವನ್ನು ಉಪಯೋಗಿಸಲ್ಪಟ್ಟಿತ್ತು ಎಂಬುದನ್ನು ವಾಹನ ಮಾಲೀಕರು ಸಾಬೀತುಪಡಿಸಿದ್ದಾರೆಯೇ?
3. ಜಪ್ತು ಪಡಿಸಲಾಗಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಒಂದನೇ ಅಂಶವನ್ನು ಗುಣತ್ಮಾಕವಾಗಿ,ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:**

ಪ್ರಕರಣದ ಫಿರ್ಯಾದುದಾರ ಹಾಗೂ ತನಿಖಾಧಿಕಾರಿಗಳಾದ ಶ್ರೀ ಕೆ.ಕುಶಾಲಪ್ಪಗೌಡ, ಅಬಕಾರಿ ಉಪ ನಿರೀಕ್ಷಕರು(2), ಮಂಗಳೂರು ದಕ್ಷಿಣ ವಲಯ–2, ಮಂಗಳೂರು ರವರು ದಿನಾಂಕ:15.07.2009 ರಂದು ಅಭಿಯೋಗದ ಪರ ಪಿ.ಡಬ್ಲ್ಯೂ–1 ರವರಾಗಿ ಸಾಕ್ಷ್ಯ ನೀಡುತ್ತಾ ನಾನು ದಿನಾಂಕ:01.04.2008 ರಿಂದ ಅಬಕಾರಿ ನಿರೀಕ್ಷಕರ ಕಚೇರಿ, ಮಂಗಳೂರು ದಕ್ಷಿಣ ವಲಯ–2 ಅಬಕಾರಿ ಉಪ ನಿರೀಕ್ಷಕನಾಗಿ ನಿಯೋಜನೆ ಮೇರೆಗೆ ಕರ್ತವ್ಯ ನಿರ್ವಹಿಸುತಿದ್ದೆ. ದಿನಾಂಕ:14.05.2009 ರಂದು ಸಾಯಂಕಾಲ ಸಿಬ್ಬಂದಿ ಮತ್ತು ಪಂಚರೊಂದಿಗೆ ಮಂಗಳೂರು ತಾಲೂಕು ಬೆಳ್ಮ ಗ್ರಾಮದ ನಾಟೇಕಲ್ ಸರ್ಕಲ್‌ನಲ್ಲಿ ನಿಂತು ಮಂಗಳೂರು ಕಡೆಯಿಂದ ಮಂಜನಾಡಿ ಮೂಲಕ ಕೇರಳಕ್ಕೆ ಹೋಗುವಂತಹ ವಾಹನಗಳನ್ನು ತಪಾಸಣೆ ಮಾಡುವ ಸಂದರ್ಭ ಸಂಜೆ 6–30 ಘಂಟೆ ಸಮಯಕ್ಕೆ ಮಂಗಳೂರು ಕಡೆಯಿಂದ ಒಂದು ಬಿಳಿ ಬಣ್ಣದ ಆಲ್ಟೋ ಕಾರು ಬರುವುದು ಕಾಣಿಸಿಕೊಂಡು ಸದರಿ ವಾಹನವನ್ನು ತಪಾಸಣೆ ಮಾಡುವ ಉದ್ದೇಶಕ್ಕಾಗಿ ನಿಲ್ಲಿಸಲು ಸೂಚನೆ ನೀಡಿದಾಗ ವಾಹನದಲ್ಲಿ ಚಾಲಕನೊಬ್ಬನೇ ಇದ್ದು, ಆತನು ವಾಹನವನ್ನು ನಿಲ್ಲಿಸದೇ ಮಂಜನಾಡಿ ಕಡೆಗೆ ಚಲಾಯಿಸಿಕೊಂಡು ಹೋದನು. ತಕ್ಷಣ ನಾವು ಸರ್ಕಾರಿ ವಾಹನದಲ್ಲಿ ಸದ್ರಿ ವಾಹನವನ್ನು ಬೆನ್ನಟ್ಟಿ ಸುಮಾರು 2 ಫರ್ಲಾಂಗ್ ದೂರದಲ್ಲಿ ಅದನ್ನು ನಿಲ್ಲಿಸಿ ನೋಡಲಾಗಿ ಅದರ ಎದುರು ಹಾಗೂ ಹಿಂಬದಿ ಭಾಗಕ್ಕೆ KA-19N-7269 ಎಂಬ ನಾಮಫಲಕವನ್ನು ಜೋಡಿಸಲಾಗಿದ್ದು, ವಾಹನವನ್ನು ಸುತ್ತುವರಿದು ಚಾಲಕನನ್ನು ವಿಚಾರಿಸಲಾಗಿ ಕಾರಿನಲ್ಲಿ ಶರಾಬು ಸ್ಯಾಚೆಟ್‌ಗಳು ಇರುವುದಾಗಿ ಹಾಗೂ ಸದ್ರಿ ಸಾರಾಯಿ ಸ್ಯಾಚೆಟ್‌ಗಳನ್ನು ಮೀಯಪದವಿನ ಪ್ರವೀಣ ಹಾಗೂ ಕುಂಜತ್ತೂರಿನ ಜಯರಾಮ ಎಂಬವರ ಪರವಾಗಿ ಮೀಯ ಪದವಿಗೆ ಸಾಗಿಸುತ್ತಿರುವುದಾಗಿಯೂ, ಸದ್ರಿ ಸಾರಾಯಿ ಸ್ಯಾಚೆಟ್‌ಗಳನ್ನು ಕುತ್ತಾರು ಪದವಿನ ರಾಜರಾಜೇಶ್ವರಿ ಭಜನಾ ಮಂದಿರದ ಹಿಂಬದಿಯ ಮೈದಾನದಲ್ಲಿ ಎಲಿಯಾರು ಪದವಿನ ಮೋಹನದಾಸ ಶೆಟ್ಟಿ ಹಾಗೂ ಪಂಡಿತ್ ಹೌಸಿನ ಬ್ರಿಜೇಶ್ ಎಂಬವರು ಕಾರಿಗೆ ಲೋಡ್ ಮಾಡಿರುವುದಾಗಿ ತಿಳಿಸಿದನು. ನಂತರ ಸದ್ರಿ ಚಾಲಕನ ವಿಳಾಸವನ್ನು ಕೇಳಲಾಗಿ ತನ್ನ ಹೆಸರು ನೌಷಾದ್,ಬಿನ್:ದಿ:ಮೊೖದು,ಪೆರ್ಮುದೆ ಮನೆ,ಪೈವಳಿಕೆ ಗ್ರಾಮ, ಕಾಸರಗೋಡು ಜಿಲ್ಲೆ,ಕೇರಳ ರಾಜ್ಯ.ಎಂದು ತಿಳಿಸಿದನು . ನಂತರ ಸದ್ರಿ ವಾಹನವನ್ನು ತಪಾಸಣೆ ಮಾಡಲು ಮಾನ್ಯ ನ್ಯಾಯಾಲಯ ದಿಂದ ವಾರೆಂಟನ್ನು ಪಡೆಯಲು ಕಾಲಾವಕಾಶ ಇಲ್ಲದ ಕಾರಣ ಕ.ಅ ಕಾಯಿದೆ 1965 ರ ಕಲಂ 54 ರೀತ್ಯಾ ಸರ್ಚ್ ಮೆಮೊ ತಯಾರಿಸಿ, ಕಾರನ್ನು ಶೋಧಿಸಲಾಗಿ ಸದ್ರಿ ಕಾರಿನ ಚಾಸಿಸ್ ನಂ: MA3EYD81500326263B4 ಹಾಗೂ ಇಂಜಿನ್ ಸಂ:RL6C705151 ಎಂದು ತಿಳಿದು ಬಂದು ಕಾರಿನ ಒಳಬದಿ ಶೋಧಿಸಲಾಗಿ ಚಾಲಕನ ಹಿಂಬದಿಯ ಸೀಟನ್ನು ಬಿಡಿಸಿ ಅದರ ಮೇಲೆ 14 ಬಿಳಿ ಬಣ್ಣದ ನೈಲಾನ್ ಚೀಲಗಳ ಕಟ್ಟುಗಳು ಕಂಡು ಬಂದವು. ಸದರಿ ಎಲ್ಲಾ 14 ಚೀಲಗಳನ್ನು ಬಿಚ್ಚಿ ನೋಡಲಾಗಿ ಪ್ರತಿ ಚೀಲದಲ್ಲಿ 100 ಮಿ.ಲಿ ಶರಾಬು ಇರುವ ತೊಟ್ಟೆಯ ಮೇಲೆ ನಂ:ECE/14 D&A 2005-06 ಮೈಶುಗರ್ ಕಂಪೆನಿ ದಿ:06–9–2006 ಎಂದು ಕೆಂಪು ಅಕ್ಷರದಲ್ಲಿ ನಮೂದಿಸಿದ 100 ಮಿ.ಲಿಯ ತಲಾ 500 ಸ್ಯಾಚೆಟ್‌ಗಳಂತೆ 14 ಚೀಲಗಳಲ್ಲಿ ಒಟ್ಟು 7000 ಸ್ಯಾಚೆಟ್‌ಗಳು ಕಂಡು ಬಂದವು. ಸದ್ರಿ ಚೀಲಗಳಿಗೆ ಕ್ರ.ಸಂ.1 ರಿಂದ 14 ರ ತನಕ ನೀಡಿ ಸದ್ರಿ ಚೀಲಗಳಿಂದ ರಾಸಾಯನಿಕ ಪರೀಕ್ಷೆಗಾಗಿ 100 ಮಿ.ಲಿಯ ಪ್ರತಿ

ಚೀಲಗಳಿಂದ ತಲಾ 10 ಪ್ಯಾಕೆಟ್‌ಗಳಂತೆ ತೆಗೆದು, ಅವುಗಳಿಗೆ ಬಟ್ಟೆದಾರದಿಂದ ಸುತ್ತಿ, ಇಲಾಖಾ ಸೀಲು ಮಾಡಿ, ಮಾದರಿ ಮೊಹರನ್ನು ತಯಾರಿಸಿ, ಮಹಜರು ಹಾಗೂ ದಸ್ತಗಿರಿ ಮೆಮೊವನ್ನು ತಯಾರಿಸಿ ಸೊತ್ತುಗಳ ಸಮೇತ ಆರೋಪಿಯನ್ನು ದಸ್ತಗಿರಿ ಮಾಡಲಾಯಿತು. ಈ ಕಾರ್ಯಾಚರಣೆಯು ಸಂಜೆ 6-30 ರಿಂದ ರಾತ್ರಿ 8-00 ಗಂಟೆ ವರೆಗೆ ನಡೆದು, ಸದ್ರಿ ಮಹಜರನ್ನು ಈಗ ನೋಡಿ ನಿಶಾನೆ ಪಿ-1 ಎಂದು, ಸಾಕ್ಷಿದಾರರ ಸಹಿಯನ್ನು ನಿಶಾನೆ ಪಿ-1 ಎ ಎಂದು ಗುರುತಿಸಲಾಯಿತು. ನಂತರ ಕಚೇರಿಗೆ ಬಂದು, ಈ ಬಗ್ಗೆ ಒಂದು ಮೊಕದ್ದಮೆ ದಾಖಲಿಸಿಕೊಂಡು ದಾಖಲೆಗಳೊಂದಿಗೆ ಆರೋಪಿಯನ್ನು ಮಾನ್ಯ ನ್ಯಾಯಾಲಯಕ್ಕೆ ಹಾಜರು ಪಡಿಸಲಾಯಿತು. ಹಾಗೂ ದಾಖಲೆ ಪತ್ರಗಳ ಪ್ರತಿಯನ್ನು ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ ಜಿಲ್ಲೆ, ಮಂಗಳೂರು ಇವರಿಗೆ ಸಲ್ಲಿಸಲಾಗಿದೆ. ಪ್ರಥಮ ಮಾಹಿತಿ ವರದಿ ಸಂಖ್ಯೆ: 3/2009-10 ದಿನಾಂಕ:14.05.2009 ರಂತೆ ತಯಾರಿಸಲಾದ ಪ್ರಥಮ ಮಾಹಿತಿ ವರದಿಯನ್ನು ಈಗ ನೋಡಿ , ಅದನ್ನು ನಿಶಾನೆ ಪಿ-2 ಎಂದು ಅದರ ಮೇಲಿನ ಸಹಿಯನ್ನು ನಿಶಾನೆ ಪಿ-2ಎ ಎಂದು ಗುರುತಿಸಲಾಯಿತು. ಜಪ್ತು ಮಾಡಿದ ಸೊತ್ತುಗಳಿಂದ ತೆಗೆದ ಮಾದರಿ ಸೀಸೆಗಳನ್ನು ದಿನಾಂಕ:19.05.2009 ರಂದು ಅಬಕಾರಿ ರಕ್ಷಕರಾದ ಶ್ರೀ ಚೆನಿಯಪ್ಪ ನಾಯ್ಕ್ ಇವರೊಂದಿಗೆ ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ವಲಯ ಇವರಿಗೆ ಕಳುಹಿಸಿ ಸದ್ರಿಯವರಿಂದ ದಿನಾಂಕ:12.06.2009 ರಂದು ವರದಿಯನ್ನು ಪಡೆದುಕೊಳ್ಳಲಾಗಿದೆ. ಸದ್ರಿ ವರದಿ ಪ್ರಕಾರ ಮಾದರಿ ಸ್ಯಾಚೆಟ್‌ಗಳಲ್ಲಿ ಶರಾಬಿನ ತೀಕ್ಷ್ಣತೆ ಶೇ.22 ಎಂದು ದೃಢೀಕರಿಸಲಾಗಿದ್ದು, ಸದ್ರಿ ವರದಿಯ ಪ್ರತಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು. ಈ ಮಧ್ಯೆ ಸದ್ರಿ ಜಪ್ತು ಮಾಡಿದ ಕಾರಿನ ಮಾಲೀಕರ ಬಗ್ಗೆ ತಿಳಿಯುವ ಉದ್ದೇಶಕ್ಕಾಗಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ದ. ಕ ಜಿಲ್ಲೆ,ಮಂಗಳೂರು ಇವರಿಗೆ ಕೋರಿಕೆ ಪತ್ರವನ್ನು ಸಲ್ಲಿಸಿ, ಅವರಿಂದ ಬಿ.ಎಕ್ಸ್ ಟ್ರಾಕ್ಟ್ ವರದಿಯನ್ನು ಪಡೆದುಕೊಳ್ಳಲಾಗಿದ್ದು, ಸದ್ರಿ ವರದಿಯ ಪ್ರಕಾರ ವಾಹನ ಸಂ:KA-19N-7269 ಆಗಿದ್ದು, ಡಾ:ಉದಯ್‌ಕುಮಾರ್, ಬಿನ್ ಆರ್.ಬಿ.ಯರಾಗಳ್ಳಿ, ಎಆರ್-14, ಕೆ.ಆರ್.ಇ.ಸಿ ಕ್ಯಾಂಪಸ್ ಶ್ರೀನಿವಾಸ ನಗರ ಅಂಚೆ,ಸುರತ್ಕಲ್, ಮಂಗಳೂರು ಎಂಬವರಿಗೆ ಸೇರಿದ್ದು, ವರದಿಯಲ್ಲಿ ನಮೂದಿಸಿದ ವಾಹನದ ಚಾಸಿಸ್ ಮತ್ತು ಇಂಜಿನ್ ನಂಬರಿಗೂ ಜಪ್ತು ಮಾಡಿದ ವಾಹನದಲ್ಲಿರುವ ಚಾಸಿಸ್ ಮತ್ತು ಇಂಜಿನ್ ನಂಬರಿಗೂ ತಾಳೆ ನೋಡಲಾಗಿ ಒಂದಕ್ಕೊಂದು ತಾಳೆ ಕಂಡು ಬಾರದೇ ಇರುವುದರಿಂದ ಆರೋಪಿಗಳು ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳನ್ನು ಸಾಗಿಸುವ ಸಂದರ್ಭದಲ್ಲಿ ವಾಹನದ ಮಾಲೀಕರ ಸುಳಿವು ಸಿಗಬಾರದೆಂದು ಡಾ.ಉದಯಕುಮಾರ್ ಎಂಬವರಿಗೆ ಸೇರಿದ ಮಾರುತಿ ಕಂಪೆನಿಯ ಆಲ್ಟೋ ಕಾರಿನ ನೊಂದಣಿ ಸಂಖ್ಯೆಯನ್ನು ಹೋಲುವ ನಕಲಿ ನಂಬರ್ ಪ್ಲೇಟನ್ನು ಅಳವಡಿಸಿ, ಕಳ್ಳ ಸಾಗಾಣಿಕೆ ಮಾಡಿರುವುದು ತನಿಖೆಯಿಂದ ಕಂಡು ಬಂದಿರುತ್ತದೆ. ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಇವರಿಂದ ಪಡೆಯಲಾದ ಬಿ.ಎಕ್ಸ್‌ಟ್ರಾಕ್ಟ್ ವರದಿಯನ್ನು ಪ್ರಾಧಿಕಾರಕ್ಕೆ ಸಲ್ಲಿಸಿದ್ದು, ಅದನ್ನು ಈಗ ನೋಡಲಾಗಿ ನಿಶಾನೆ ಪಿ-4 ಎಂದು ಗುರುತಿಸಲಾಯಿತು. ಸದ್ರಿ ಬಿಎಕ್ಸ್ ಟ್ರಾಕ್ಟ್ ವರದಿಯಲ್ಲಿ ನಮೂದಿತವಾದ ಶ್ರೀ ಉದಯ ಕುಮಾರ್ ಇವರಿಗೆ ಪ್ರಾಧಿಕಾರದಿಂದ ನೀಡಲಾದ ಕಾರಣ ಕೇಳುವ ನೋಟೀಸನ್ನು ಖುದ್ದಾಗಿ ಜಾರಿ ಮಾಡಿ ಸದ್ರಿಯವರಿಂದ ಈ ಬಗ್ಗೆ ಒಂದು ಹೇಳಿಕೆಯನ್ನು ಪಡೆಯಲಾಗಿದ್ದು, ಸದ್ರಿ ಹೇಳಿಕೆಯಲ್ಲಿ KA 19N-7269 ನೊಂದಣಿ ಸಂಖ್ಯೆಯ ನೀಲಿ ಬಣ್ಣದ ಆಲ್ಟೋ ಕಾರು ನನ್ನದಾಗಿದ್ದು, ಅದು ನನ್ನ ಸ್ವಾಧೀನದಲ್ಲಿಯೇ ಈಗಲೂ ಇದೆ ಎಂದು ತಿಳಿಸಿ, ಲಿಖಿತ ಹೇಳಿಕೆ ನೀಡಿ ಅವರ ಸುಪರ್ದಿಯಲ್ಲಿರುವ ಕಾರನ್ನು ನನಗೆ ತೋರಿಸಿರುತ್ತಾರೆ. ಅದನ್ನು ನಾನು ಖುದ್ದಾಗಿ ವೀಕ್ಷಿಸಿರುತ್ತೇನೆ. ತದನಂತರ ಸದ್ರಿ ಜಪ್ತು ಮಾಡಿದ ಸೊತ್ತುಗಳನ್ನು ವಾಹನ ಸಮೇತ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ಇವರಿಗೆ ಅಬಕಾರಿ ನಿರೀಕ್ಷಕರು, ಮಂಗಳೂರು ದಕ್ಷಿಣ ವಲಯ-2 ಇವರ ಮುಖಾಂತರ ದಿನಾಂಕ:20.06.2009 ರಂದು ಶಿಫಾರಸ್ಸು ವರದಿಯನ್ನು ನೀಡಿರುತ್ತೇನೆ. ಸದ್ರಿ ವರದಿಯ ಮೂಲ ಪ್ರತಿಯನ್ನು ನಿಶಾನೆ ಪಿ-5 ಎಂದು, ಅದರ ಮೇಲಿನ ಸಹಿಯನ್ನು ನಿಶಾನೆ ಪಿ-5 ಎ ಎಂದು ವಿಚಾರಣೆ ವೇಳೆಯಲ್ಲಿ ಗುರುತಿಸಿ ವಾಹನದ ಮಾಲೀಕರ ಪರ ಯಾರೊಬ್ಬರೂ ಪ್ರಾಧಿಕಾರದ ಮುಂದೆ ಹಾಜರಾಗದೇ ಇರುವುದರಿಂದ ಪಾಟೀ ಸವಾಲು ಇಲ್ಲವೆಂದು ಪರಿಗಣಿಸಿ ಮುಖ್ಯ ವಿಚಾರಣೆ ಮುಕ್ತಾಯಗೊಳಿಸಲಾಗಿದೆ.

ಈ ಪ್ರಕರಣದ ಫಿರ್ಯಾದುದಾರರು ಪೂರಕವಾಗಿ ನೀಡಿರುವ ಸಾಕ್ಷ್ಯಾಧಾರದ ಮೇಲೆ ಹಾಗೂ ಲಭ್ಯವಿರುವ ದಾಖಲಾತಿಗಳಿಂದ ಹಾಗೂ ಪ್ರಕರಣದಲ್ಲಿ ಜಪ್ತು ಪಡಿಸಿಕೊಂಡ ಅಕ್ರಮ ಸೊತ್ತುಗಳು ಸಾರಾಯಿ ಎಂದು ರಾಸಾಯನಿಕ ವಿಶ್ಲೇಷಕರು ನೀಡಿದ ವರದಿಯಿಂದ ತಿಳಿದು ಬಂದಿದ್ದು ಹಾಗೂ ಸದ್ರಿ ಸೊತ್ತುಗಳನ್ನು ಸಾಗಾಟ ಮಾಡಿದ ಬಗ್ಗೆ ಯಾವುದೇ ರಹದಾರಿ ಪತ್ರವಿಲ್ಲದೇ ಇರುವುದರಿಂದ ವಾಹನ ನೊಂದಣಿ ಸಂ:KA-19N-7269 ಮಾರುತಿ ಆಲ್ಟೋ ಕಾರು ವಾಹನದಲ್ಲಿ ಅಕ್ರಮವಾಗಿ ಸಾರಾಯಿ ಸ್ಯಾಚೆಟ್‌ಗಳು ಸಾಗಾಣಿಕೆಯಾಗಿರುವುದು ಸಾಬೀತಾಗಿರುವುದರಿಂದ ಒಂದನೇ ಅಂಶವನ್ನು ಗುಣಾತ್ಮಕವಾಗಿ ಪರಿಗಣಿಸಲಾಗಿದೆ

ಸದರಿ ವಾಹನವನ್ನು ವಶಪಡಿಸಿಕೊಂಡು ಸುಮಾರು 2 ತಿಂಗಳಿಗಿಂತಲೂ ಹೆಚ್ಚು ಸಮಯ ಕಳೆದರೂ ತಕ್ಷೀರಿನಲ್ಲಿ ದಸ್ತಗಿರಿಯಾದ ಆರೋಪಿಗಳು ಅಥವಾ ವಾಹನದ ಆರ್.ಸಿ. ಮಾಲೀಕರು ವಾಹನಕ್ಕೆ ಸಂಬಂಧಿಸಿ ವಾಹನದ ಮಾಲೀಕತ್ವವನ್ನು ನಿರೂಪಿಸಿ ಮಧ್ಯಂತರ ಬಿಡುಗಡೆ ಕೋರಿ ಸಂಬಂಧಪಟ್ಟ ದಾಖಲೆಗಳನ್ನು ಹಾಜರುಪಡಿಸಿರುವುದಿಲ್ಲ. ಹಾಗೂ ವಾಹನದ ಮಾಲಿಕತ್ವವನ್ನು ತಿಳಿದುಕೊಳ್ಳುವರೇ ಏಕೈಕ ಮಾರ್ಗವಾದ ಬಿ ರಿಜಿಸ್ಟ್ರರ್ ಎಕ್ಸ್‌ಟ್ರಾಕ್ಟ್ ವರದಿಯನ್ನು ಸಂಬಂಧಿಸಿದ ಪ್ರಾದೇಶಿಕ

ಸಾರಿಗೆ ಅಧಿಕಾರಿಗಳಿಂದ ಪಡೆದು,ಪರಿಶೀಲಿಸಲಾಗಿ ಜಪ್ತುಪಡಿಸಿದ ವಾಹನದ ಚಾಸಿಸ್/ಇಂಜಿನ್ ನಂಬರ್ ಬಿ.ಎಕ್ಸ್ ಟ್ರಾಕ್ಟ್ ವರದಿಯೊಂದಿಗೆ ತಾಳೆ ಕಂಡು ಬಾರದೇ ಇರುವುದರಿಂದ ಪ್ರಕರಣ ಸಂದರ್ಭದಲ್ಲಿ ವಾಹನಕ್ಕೆ ನಕಲಿ ನಂಬರ್ ಪ್ಲೇಟ್ ಅಳವಡಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುತ್ತದೆ.ಆದಾಗ್ಯೂ 'ಬಿ' ಎಕ್ಸ್‌ಟ್ರಾಕ್ಟ್ ವರದಿಯಲ್ಲಿ ನಮೂದಿಸಿದ ವಾಹನದ ಮಾಲೀಕರಿಗೆ ನೀಡಲಾದ ಕಾರಣ ಕೇಳಿ ನೋಟೀಸಿಗೆ ಸದ್ರಿ ಆರ್.ಸಿ ಮಾಲೀಕರು ತನ್ನ ಒಡೆತನದಲ್ಲಿರುವ ಮಾರುತಿ ಆಲ್ಟೋ ಕಾರು ಸಂ:KA-19N-7269 ತನ್ನ ಸುಪರ್ದಿಯಲ್ಲೇ ಇದ್ದು, ಯಾವುದೇ ಅಕ್ರಮಗಳಲ್ಲಿ ಜಪ್ತಾಗಿರುವುದಿಲ್ಲ ಎಂದು ತಿಳಿಸಿರುವುದರಿಂದ, ಪ್ರಕರಣದ ಆರೋಪಿತ ವ್ಯಕ್ತಿಗಳು ಅಪರಾಧದಿಂದ ನುಣುಚಿಕೊಳ್ಳುವ ಸಲುವಾಗಿ ಜಪ್ತಾದ ವಾಹನಕ್ಕೆ ಉದ್ದೇಶ ಪೂರ್ವಕವಾಗಿ ನಕಲಿ ನಂಬರ್ ಪ್ಲೇಟನ್ನು ಅಳವಡಿಸಿಕೊಂಡು ತನ್ನ ತಿಳುವಳಿಕೆಯಿಂದಲೇ ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿರುವುದು ಕಂಡು ಬರುತ್ತದೆ.

ಅಲ್ಲದೆ ವಾಹನ ಮತ್ತು ಜಪ್ತು ಪಡಿಸಲಾದ ಇತರ ಸೊತ್ತುಗಳನ್ನು ತನ್ನ ಸುಪರ್ದಿಗೆ ಪಡೆಯಲು ಮತ್ತು ತಕ್ಷೀರನ್ನು ನಡೆಸಲು ಯಾರೊಬ್ಬರೂ ಉತ್ಸುಕರಿಲ್ಲದಿರುವುದನ್ನು ಪ್ರಾಧಿಕಾರವು ಮನಗಂಡು ಅಕ್ರಮ ಸಾರಾಯಿ ಸಾಗಾಣಿಕೆಗೆ ಬಳಸಿದ ಮಾರುತಿ ಆಲ್ಟೋ ಕಾರು ಸಂಖ್ಯೆ: KA-19N-7269 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಸೂಕ್ತ ಹಾಗೂ ಯೋಗ್ಯವೆಂದು ತೀರ್ಮಾನಿಸಿ ಈ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯಿದೆ 1965 ರ ಕಾಲಂ 43(ಬಿ) ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಾಲಂ 43 ಎ ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು(2), ಮಂಗಳೂರು ದಕ್ಷಿಣ ವಲಯ–2, ಮಂಗಳೂರು ಇವರ ತಕ್ಷೀರು ಸಂಖ್ಯೆ; 3/2009–10 ದಿನಾಂಕ:14.05.2009 ರಲ್ಲಿ ಜಪ್ತುಪಡಿಸಿದ ಚಾಸಿಸ್ ಸಂ:MA3EYD81500-326263B4 ಮತ್ತು ಇಂಜಿನ್ ಸಂ:RL6C705151 ಇರುವ ನಕಲಿ ನೊಂದಾಣಿ ಸಂಖ್ಯೆ ಉಪಯೋಗಿಸಲಾಗಿರುವ ವಾಹನ ಮಾರುತಿ ಆಲ್ಟೋ ಕಾರು ಸಂಖ್ಯೆ: KA-19N-7269 ನ್ನು ಕರ್ನಾಟಕ ಅಬಕಾರಿ ಕಾಯಿದೆ ಕಾಲಂ 43ಸಿ ಯಡಿ ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ದಿನಾಂಕ:17.07.2009 ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜಾರಿಯಲ್ಲಿ ಬರುತ್ತದೆ.

**ನೂರ್ ಮಹ್ಮಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–I : ಶ್ರೀ.ಕೆ.ಕುಶಾಲಪ್ಪ ಗೌಡ,
ಅಬಕಾರಿ ಉಪ ನಿರೀಕ್ಷಕರು (2), ಮಂಗಳೂರು ದಕ್ಷಿಣ ವಲಯ–2, ಮಂಗಳೂರು.

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

| | |
|---|---|
| ನಿಶಾನೆ ಪಿ–I | : ಮಹಜರು ಪತಿ |
| ನಿಶಾನೆ ಪಿ–Iಎ | : ಅದರ ಮೇಲಿನ ಸಹಿ |
| ನಿಶಾನೆ ಪಿ–2 | : ಪ್ರಥಮ ವರ್ತಮಾನ ವರದಿ |
| ನಿಶಾನೆ ಪಿ–2ಎ | : ಅದರ ಮೇಲಿನ ಸಹಿ |
| ನಿಶಾನೆ ಪಿ–3 | : ರಾಸಾಯನಿಕ ವಿಶ್ಲೇಷಣಾ ವರದಿ |
| ನಿಶಾನೆ ಪಿ–4 | : ಬಿ ಎಕ್ಸ್‌ಟ್ರಾಕ್ಟ್ ವರದಿ |
| ನಿಶಾನೆ ಪಿ–5 | : ತನಿಖಾ ವರದಿ |
| ನಿಶಾನೆ ಪಿ–5ಎ | : ಅದರ ಮೇಲಿನ ಸಹಿ |

**ಅನುಬಂಧ–III**

ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:

ಅರ್ಜಿದಾರರ ಹೇಳಿಕೆ: – ಯಾವುದು ಇಲ್ಲ–

**ಅನುಬಂಧ–IV**

ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು: – ಯಾವುದು ಇಲ್ಲ–

**ನೂರ್ ಮಹ್ಮಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

ಪಿ.ಆರ್.734

**ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್ ದ.ಕ.ಜಿಲ್ಲೆ,**
**ಮಂಗಳೂರು ಇವರ ನ್ಯಾಯಾಲಯದಲ್ಲಿ**
**ನಂ:ಎಸ್‌ಡಿಕೆ/368/ಡಿಟಿಸಿಆರ್/2004–05, ದಿನಾಂಕ:29ನೇ ಜುಲೈ, 2009**

**ಉಪಸ್ಥಿತರು:** ನೂರ್ ಮಹಮ್ಮದ್ ಹುಸೇನ್
ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

| **ಫಿರ್ಯಾದುದಾರರು:** | **ಆರೋಪಿಗಳು:** |
|---|---|
| ಅಬಕಾರಿ ಉಪ ನಿರೀಕ್ಷಕರು(1)<br>ಮಂಗಳೂರು ಉಪ ವಿಭಾಗ<br>ಮಂಗಳೂರು. | 1) ಸಿರಿಲ್ ಮಸ್ಕರೇನಸ್, ಬಿನ್ ಇನಾಸ್ ಮಸ್ಕರೇನಸ್,<br>ಶಕ್ತಿನಗರ ಗ್ರಾಮ ಮತ್ತು ಅಂಚೆ, ಮಂಗಳೂರು.<br>2) ಜನಾರ್ಧನ ಸಪಲ್ಯ, ಬಿನ್ ತಾಡ ಸಪಲ್ಯ, ಬೊಂಡಂತಿಲ,<br>ಪಡು ಅಂಚೆ, ಮಂಗಳೂರು.<br>**ವಾಹನದ ಮಾಲೀಕರು**<br>ಶ್ರೀ ವಲೇರಿಯನ್ ಮಸ್ಕರೇನಸ್, ಬಿನ್ ಇಗ್ನೇಷಿಯಸ್<br>ಮಸ್ಕರೇನಸ್, ನಿಯರ್ ಕೆನರಾ ರಬ್ಬರ್ ವರ್ಕ್ಸ್, ಶಕ್ತಿನಗರ,<br>ಮಂಗಳೂರು. |

**ಪ್ರಕರಣದ ಮುಖ್ಯಾಂಶಗಳು:**

ಅಬಕಾರಿ ಉಪ ನಿರೀಕ್ಷಕರು ಮಂಗಳೂರು ಉಪ ವಿಭಾಗ ಇವರು ದಿನಾಂಕ:05.04.2005 ರಂದು ಬೆಳಿಗ್ಗೆ 11–30 ಗಂಟೆ ಸಮಯಕ್ಕೆ ಮಂಗಳೂರು ತಾಲೂಕು ನೀರುಮಾರ್ಗ ಎಂಬ ಜಂಕ್ಷನ್‌ನಲ್ಲಿ ರಸ್ತೆಗಸ್ತು ನಿಮಿತ್ತ ಸಾಗುತ್ತಿರುವಾಗ ಅಭಿಮುಖವಾಗಿ ಒಂದು ಆಟೋರಿಕ್ಷಾ ಒಂದು ಭಾರವಾದ ವಸ್ತುಗಳನ್ನು ಹೇರಿಕೊಂಡು ಬರುತ್ತಿರುವುದನ್ನು ಗಮನಿಸಿ ಅನುಮಾನಗೊಂಡು ಸದ್ರಿ ಆಟೋ ರಿಕ್ಷಾವನ್ನು ತಡೆದು ನಿಲ್ಲಿಸಿದಾಗ ಅದರ ನೊಂದಣಿ ಸಂಖ್ಯೆ:CTX-8329 ಆಗಿದ್ದು, ಅದರಲ್ಲಿ ಚಾಲಕ ಮತ್ತು ಇನ್ನೋರ್ವ ವ್ಯಕ್ತಿಯಿದ್ದು, ಸದ್ರಿ ಆಟೋ ರಿಕ್ಷಾವನ್ನು ಶೋಧನೆ ನಡೆಸಲು ತೀರ್ಮಾನಿಸಿ, ಮಾನ್ಯ ನ್ಯಾಯಾಲಯದಿಂದ ಶೋಧನಾ ವಾರೆಂಟನ್ನು ಪಡೆಯಲು ಕಾಲಾವಕಾಶವಿಲ್ಲದ ಕಾರಣ ಅಬಕಾರಿ ಕಾಯಿದೆ 1965 ರ ಕಲಂ 54 ರ ಪ್ರಕಾರ ಶೋಧನಾ ವಾರೆಂಟನ್ನು ತಯಾರಿಸಿ, ಸದ್ರಿ ಆಟೋ ರಿಕ್ಷಾವನ್ನು ಶೋಧಿಸಲಾಗಿ, 35 ಲೀಟರ್ ಗಾತ್ರದ ಬಿಳಿ ಬಣ್ಣದ 8 ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಒಟ್ಟು 280.000 ಲೀಟರ್ ಶೇಂದಿಯನ್ನು ಯಾವುದೇ ರಹದಾರಿ ಇಲ್ಲದೇ ಸಾಗಾಟ ಮಾಡುತ್ತಿರುವುದನ್ನು ಪತ್ತೆ ಹಚ್ಚಿ, ಇದು ಅಕ್ರಮ ಶೇಂದಿ ಸಾಗಾಟವೆಂಬುದಾಗಿ ಖಚಿತಪಡಿಸಿಕೊಂಡು,ಇದು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 1965ರ ಕಲಂ 11, 12 ಮತ್ತು 14(2) ಹಾಗೂ ಅಬಕಾರಿ ಕಾಯಿದೆ (ಶೇಂದಿ ಉತಾರು ನಿಯಮ) 1991ರ ನಿಯಮ 22 ರ ಉಲ್ಲಂಘನೆ ಆಗಿದ್ದು, ಕಲಂ 34 ಮತ್ತು 38 (ಎ) ಪ್ರಕಾರ ಶಿಕ್ಷಾರ್ಹವಾಗಿರುವುದರಿಂದ, ಸದ್ರಿ ವಾಹನ ಮತ್ತು 280.000 ಲೀಟರು ಶೇಂದಿಯನ್ನು ಜಪ್ತುಮಾಡಿ, ಸ್ಥಳದಲ್ಲಿಯೇ ಮಹಜರನ್ನು ತಯಾರಿಸಿ, ವಾಹನದಲ್ಲಿದ್ದ ಆರೋಪಿಗಳಾದ (1) ಸಿರಿಲ್ ಮಸ್ಕರೇನಸ್,ಬಿನ್:ಇನಾಸ್ ಮಸ್ಕರೇನಸ್, ಶಕ್ತಿನಗರ ಗ್ರಾಮ ಮತ್ತು ಅಂಚೆ, ಮಂಗಳೂರು. (2) ಜನಾರ್ಧನ ಸಪಲ್ಯ, ಬಿನ್:ತಾಡ ಸಪಲ್ಯ, ಬೊಂಡಂತಿಲ, ಪಡು ಅಂಚೆ, ಮಂಗಳೂರು ಇವರುಗಳ ವಿರುದ್ಧ ತಕ್ಷೀರು ಸಂಖ್ಯೆ:19/04–05, ದಿನಾಂಕ:05.04.2005 ರಂದು ಮೊಕದ್ದಮೆಯನ್ನು ದಾಖಲಿಸಿಕೊಂಡು ಪ್ರಥಮ ಮಾಹಿತಿ ವರದಿ, ಮಹಜರು ಮತ್ತು ಸೊತ್ತುಗಳ ಪಟ್ಟಿಯನ್ನು ಮಾನ್ಯ ನ್ಯಾಯಾಲಯಕ್ಕೆ ಸಲ್ಲಿಸಿ, ಸದ್ರಿ ಸೊತ್ತುಗಳನ್ನು ಅಂತಿಮ ವರದಿ ಸಲ್ಲಿಸುವ ತನಕ ಅವರ ಸ್ವಾಧೀನದಲ್ಲಿಟ್ಟುಕೊಳ್ಳಲು ಪ್ರಾಧಿಕಾರದಲ್ಲಿ ಅನುಮತಿ ಕೋರಿದ ಮೇರೆಗೆ ಪ್ರಾಧಿಕಾರದ ದಿನಾಂಕ:06.04.2005ರ ಆದೇಶದಲ್ಲಿ ಅನುಮತಿಯನ್ನು ನೀಡಲಾಗಿರುತ್ತದೆ.

**ಸೊತ್ತುಗಳ ವಿವರ**

1) ಲ್ಯಾಂಬ್ರೆಟ್ಟಾ ಆಟೋ ರಿಕ್ಷಾ ನೊಂದಣಿ ಸಂ:CTX-8329
2) 35 ಲೀ ಗಾತ್ರದ 8 ಬಿಳಿ ಪ್ಲಾಸ್ಟಿಕ್ ಕ್ಯಾನುಗಳಲ್ಲಿ ಒಟ್ಟು 280.000 ಲೀ ಶೇಂದಿ.
(ಸದ್ರಿ ಪ್ರತಿ ಕ್ಯಾನಿನಿಂದ ತಲಾ ಒಂದೊಂದರಂತೆ 375 ಎಂಎಲ್ ನ 8 ಬಾಟಲಿಗಳಲ್ಲಿ ಶೇಂದಿಯನ್ನು ರಾಸಾಯನಿಕ ವಿಶ್ಲೇಷಣೆಗಾಗಿ ಮಾದರಿ ತೆಗೆಯಲಾಗಿದೆ)

ತಕ್ಷೀರಿನಲ್ಲಿ ವಶಪಡಿಸಿಕೊಂಡ ಆಟೋರಿಕ್ಷಾ ನೊಂದಣಿ ಸಂ: CTX-8329 ಇದರ ನೊಂದಾಣಿ ಮಾಲೀಕರೆಂದು ಹೇಳಿಕೊಂಡ ಶ್ರೀ ವಲೇರಿಯನ್ ಮಸ್ಕರೇನಸ್, ಬಿನ್ ಇಗ್ನೇಷಿಯಸ್ ಮಸ್ಕರೇನಸ್, ನಿಯರ್ ಕೆನರಾ ರಬ್ಬರ್ ವರ್ಕ್ಸ್, ಶಕ್ತಿನಗರ, ಮಂಗಳೂರು ಇವರು ದಿನಾಂಕ:15.04.2005 ರಂದು ಅಂದಿನ ಪ್ರಾಧಿಕಾರದಲ್ಲಿ ಅರ್ಜಿಯನ್ನು ಸಲ್ಲಿಸಿ, ತಾನು ಸದ್ರಿ ರಿಕ್ಷಾದಲ್ಲಿ ದುಡಿದು, ಜೀವನ ಸಾಗಿಸುತ್ತಿದ್ದು, ಸದ್ರಿ ಶೇಂದಿಯನ್ನು ಶೇಂದಿ ಸೊಸೈಟಿಯವರ ಬಾಡಿಗೆಯ ಮೇಲೆ ಸಾಗಿಸುತ್ತಿದ್ದು, ಅಪರಾಧ ಇತ್ಯರ್ಥವಾಗುವವರೆಗೆ ಆಟೋ ರಿಕ್ಷಾವನ್ನು ತನಗೆ ಮಧ್ಯಂತರ ಸುಪರ್ದಿಗೆ ನೀಡಬೇಕೆಂದು ಹಾಗೂ ವಾಹನದ ಭದ್ರತೆಯ ಬಗ್ಗೆ ಮೌಲ್ಯಕ್ಕೆ ಸಮನಾವಾದ ಬ್ಯಾಂಕ್ ಗ್ಯಾರೆಂಟಿಯನ್ನು ಒಪ್ಪಿಸಲು ಬದ್ದನಾಗಿರುವುದಾಗಿ ತಿಳಿಸಿರುತ್ತಾರೆ.

ಅರ್ಜಿದಾರರ ಸದ್ರಿ ಅರ್ಜಿಯನ್ನು ಪರಿಗಣಿಸಿ, ಅಂದಿನ ಪ್ರಾಧಿಕಾರದ ಆದೇಶ ಸಂ:ಎಸ್‌ಡಿಕೆ/368/ ಡಿಟಿಸಿಆರ್/04–05 ದಿನಾಂಕ:15.04.2005 ರ ಆದೇಶದಲ್ಲಿ ಸದ್ರಿ ಆಟೋ ರಿಕ್ಷಾವನ್ನು ಮಾಲೀಕರಾದ ಶ್ರೀ ವಲೇರಿಯನ್ ಮಸ್ಕರೇನಸ್ ಇವರ ಮದ್ಯಂತರ ಸುಪರ್ದಿಗೆ ರೂ. 3,500/– ಮೊತ್ತದ ಬ್ಯಾಂಕ್ ಗ್ಯಾರೆಂಟಿಯನ್ನು ಪ್ರಾಧಿಕಾರಕ್ಕೆ ಒಪ್ಪಿಸುವ ಹಾಗೂ ಇತರೇ ಷರತ್ತುಗಳ ಮೇಲೆ ಮದ್ಯಂತರ ಬಿಡುಗಡೆ ಆದೇಶ ನೀಡಲಾಗಿರುತ್ತದೆ. ಆದೇಶದ ಪ್ರಕಾರ ವಾಹನದ ಮಾಲೀಕರು ರೂ.3,500/– ಮೊತ್ತದ ಬ್ಯಾಂಕ್ ಗ್ಯಾರೆಂಟಿ ಸಂ:250001 ದಿನಾಂಕ:15.04.2004ರಂತೆ ವಿಜಯ ಬ್ಯಾಂಕ್ ,ಬೆಂದೂರು ಶಾಖೆಯಿಂದ ಬ್ಯಾಂಕ್ ಗ್ಯಾರೆಂಟಿಯನ್ನು ಪಡೆದುಕೊಂಡು ಪ್ರಾದಿಕಾರಕ್ಕೆ ಸಲ್ಲಿಸಿದ್ದು, ವಾಹನವನ್ನು ದಿನಾಂಕ:18.04.2005ರಂದು ವಾಹನದ ಮಾಲೀಕರ ಸುಪರ್ದಿಗೆ ಮದ್ಯಂತರ ಬಿಡುಗಡೆ ಮಾಡಲಾಗಿರುತ್ತದೆ.

ಪ್ರಕರಣದಲ್ಲಿ ಜಪ್ತಾದ ವಾಹನ ಆಟೋ ರಿಕ್ಷಾ ನೊಂದಣಿ ಸಂ: CTX-8329 ಇದರ ನೊಂದಾಣಿ ಮಾಲೀಕರಾದ ಶ್ರೀ ವಲೇರಿಯನ್ ಮಸ್ಕರೇನಸ್, ಬಿನ್ ಇಗ್ನೇಷಿಯಸ್ ಮಸ್ಕರೇನಸ್, ನಿಯರ್ ಕೆನರಾ ರಬ್ಬರ್ ವರ್ಕ್ಸ್, ಶಕ್ತಿನಗರ, ಮಂಗಳೂರು ಇವರಿಗೆ ದಿನಾಂಕ:20.04.2005ರಂದು ಪ್ರಾದಿಕಾರದಿಂದ ಕರ್ನಾಟಕ ಅಬಕಾರಿ ಕಾಯಿದೆ 1965 ಕಲಂ 43ಬಿ ಪ್ರಕಾರ ಕಾರಣ ಕೇಳುವ ನೋಟಿಸನ್ನು ನೊಂದಾಯಿತ ಅಂಚೆ ಮೂಲಕ ನೀಡಲಾಗಿದ್ದು, ಸದ್ರಿ ಕಾರಣ ಕೇಳಿ ನೋಟಿಸು ವಾಹನದ ಮಾಲೀಕರಿಗೆ ದಿನಾಂಕ:30.04.2005 ರಂದು ಜ್ಯಾರಿಯಾಗಿದ್ದು, ದಿನಾಂಕ:06.05.2005ರಂದು ವಾಹನದ ಮಾಲೀಕರು ಸದ್ರಿ ನೋಟಿಸಿಗೆ ಉತ್ತರಿಸುತ್ತಾ ಪ್ರಕರಣದಲ್ಲಿ ಜಪ್ತುಪಡಿಸಿಕೊಳ್ಳಲಾದ ಶೇಂದಿ ಸಾಗಾಟಕ್ಕೆ ಯಾವುದೇ ರಹದಾರಿ ಪತ್ರದ ಅವಶ್ಯಕತೆಯಿಲ್ಲವೆಂದು ತಿಳಿಸಿ, ಪ್ರಕರಣದಲ್ಲಿ ಹೊರಿಸಲಾದ ಅರೋಪವನ್ನು ಅಲ್ಲಗಳೆದು ವಾಹನದ ಮುಟ್ಟುಗೋಲು ಅದೇಶವನ್ನು ಕೈಬಿಡಬೇಕಾಗಿ ಕೋರಿರುತ್ತಾರೆ.

ಪ್ರಕರಣದಲ್ಲಿ ಜಪ್ತಾದ ಶೇಂದಿಯ ಮಾದರಿಗಳನ್ನು ಪ್ರಕರಣದ ತನಿಖಾಧಿಕಾರಿಗಳು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿ ಕರ್ನಾಟಕ ಸಹಾಯಕ ರಾಸಾಯನಿಕ ವಿಶ್ಲೇಷಕರು, ಮಂಗಳೂರು ಇವರಿಂದ ಪಡೆದ ವಿಶ್ಲೇಷಣಾ ವರದಿ ಸಂ:137–8 ದಿನಾಂಕ:09.06.2005ರ ಪ್ರತಿಯನ್ನು ಪ್ರಾದಿಕಾರಕ್ಕೆ ಸಲ್ಲಿಸಿ, ಸದ್ರಿ ವರದಿಯಲ್ಲಿ ಶೇಂದಿಯ ಮಾದರಿಗಳಲ್ಲಿ ಮದ್ಯಸಾರದ ಅಂಶ 1.25% V/v ಇದ್ದು, ಮಾದರಿಗಳಲ್ಲಿ ಸತ್ತ ಇರುವೆಗಳು ಹಾಗೂ ಇನ್ನಿತರ ಕ್ರಿಮಿಕೀಟಗಳಲ್ಲಿದ್ದು ಕೆಟ್ಟ ವಾಸನೆಯಿಂದ ಕೂಡಿದ್ದು, ಇದು ಮಾನವನ ಸೇವನೆಗೆ ಯೋಗ್ಯವಾಗಿರುವುದಿಲ್ಲ ಎಂದು ದೃಡೀಕರಿಸಲ್ಪಟ್ಟಿರುವುದರಿಂದ, ಸದ್ರಿ ಶೇಂದಿಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವಂತೆ ದಿನಾಂಕ:24.12.2005ರಂದು ಶಿಫಾರಸ್ಸು ವರದಿಯನ್ನು ಸಲ್ಲಿಸಿರುತ್ತಾರೆ. ಆ ಪ್ರಕಾರ ಪ್ರಕರಣದಲ್ಲಿ ಜಪ್ತಾದ ವಾಹನದ ಮುಟ್ಟುಗೋಲು ನಡವಳಿಯನ್ನು ಕಾಯ್ದಿರಿಸಿ, ಜಪ್ತಾದ 280.000 ಲೀ ಶೇಂದಿ (ಮಾದರಿಗಳನ್ನು ಹೊರತು ಪಡಿಸಿ)ಯನ್ನು ಪ್ರಾಧಿಕಾರದ ದಿನಾಂಕ:16.01.2006ರ ಆದೇಶದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ನಾಶಪಡಿಸಲು ಆದೇಶಿಸಲಾಗಿರುತ್ತದೆ.

ಮೇಲಿನ ವಿದ್ಯಾಮಾನಗಳನ್ನು ಅವಲೋಕಿಸಿ ವಾಹನದ ಮುಟ್ಟುಗೋಲು ಪ್ರಕ್ರಿಯೆಯನ್ನು ನಡೆಸುವರೇ ನಡವಳಿ ವಿಚಾರಣೆಯನ್ನು ಪ್ರಾರಂಬಿಸಿ ಸರ್ಕಾರದ ಪರ 3 ಸಾಕ್ಷಿಧಾರರುಗಳನ್ನು ವಿಚಾರಣೆಗೆ ಒಳಪಡಿಸಿ ಸಾಕ್ಷಿಗಳ ಹೇಳಿಕೆಗಳನ್ನು ಹಾಗೂ ಪ್ರತಿರಕ್ಷಾ ಸಾಕ್ಷಿಯ ಹೇಳಿಕೆಯನ್ನು ಪಡೆಯಲಾಗಿರುತ್ತದೆ.

ಈ ಪ್ರಕರಣದಲ್ಲಿ ಸರ್ಕಾರದ ಅಭಿಯೋಜನ ಪರ ಸಲ್ಲಿಸಿರುವ ಸಾಕ್ಷ್ಯಾಧಾರಗಳಿಂದ ಈ ಕೆಳಗಿನ ವಿವಾದಾಂಶಗಳನ್ನು ತೀರ್ಮಾನಿಸುವುದು ಅಗತ್ಯವಾಗಿದ್ದು ಪರಿಶೀಲನಾಂಶಗಳು ಈ ಕೆಳಗಿನಂತಿರುತ್ತದೆ.

**1) ಮೊದಲನೇ ವಿವಾದಾಂಶ:** ದಿನಾಂಕ:05.04.2005 ರಂದು ಆಟೋರಿಕ್ಷಾ ನೊಂದಣಿ ಸಂ:CTX-8329 ರಲ್ಲಿ ವಾಹನದ ಮಾಲೀಕರ ತಿಳುವಳಿಕೆಯಿಂದಲೇ ಅಕ್ರಮವಾಗಿ ಶೇಂದಿಯನ್ನು ಸಾಗಾಣಿಕೆಯಾಗಿದೆಯೇ? ಮತ್ತು ವಾಹನವನ್ನು ಕರ್ನಾಟಕ ಅಬಕಾರಿ ಕಾಯಿದೆ ಮತ್ತು ನಿಯಮಗಳ ರೀತ್ಯಾ ಉಲ್ಲಂಘನೆಗೆ ಬಳಸಲಾಗಿದೆಯೇ?

**2) ಎರಡನೇ ವಿವಾದಾಂಶ:** ಸದರಿ ವಾಹನದಲ್ಲಿ ಅಕ್ರಮವಾಗಿ ಶೇಂದಿಯನ್ನು ಸಾಗಾಣಿಕೆಯಾಗಿರುವುದರ ಬಗ್ಗೆ ವಾಹನ ಮಾಲೀಕರಿಗೆ ಅರಿವಿಲ್ಲದಂತೆ ಮತ್ತು ಅವರು ಶಾಮೀಲಾಗದೆ ನಡೆದಿದೆ ಹಾಗೂ ಇದರ ಬಗ್ಗೆ ಅವರು ಸಾಕಷ್ಟು ಮುಂಜಾಗ್ರತೆ ಕ್ರಮವನ್ನು ಕೈಗೊಳ್ಳಲಾಗಿತ್ತು ಎಂಬ ಅಂಶವನ್ನು ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ತೃಪ್ತಿಕರವಾಗಿ ನಿರೂಪಿಸಿರುತ್ತಾರೆಯೇ? ಅಥವಾ ಇಲ್ಲವೇ?

**3) ಮೂರನೇ ವಿವಾದಾಂಶ:** ಜಪ್ತುಪಡಿಸಲಾದ ವಾಹನವನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ಅಥವಾ ಇಲ್ಲವೇ?

ಒಂದನೇ ಅಂಶವನ್ನು ಗುಣತ್ಮಾಕವಾಗಿ,ಎರಡನೇ ಅಂಶವನ್ನು ನಕರಾತ್ಮಕವಾಗಿ ಮತ್ತು ಮೂರನೇ ಅಂಶವನ್ನು ಅಂತಿಮ ಆದೇಶದಂತೆ.

**ಪ್ರಾ.ಸ–1:**

ಪ್ರಾಸಿಕ್ಯೂಶನ್ ಪರ ಪ್ರಕರಣದ ತನಿಖಾಧಿಕಾರಿಯಾದ ಶ್ರೀ ಕೃಷ್ಣ ನಾಯ್ಕ್, ಅ.ಉ.ನಿ, ಸುಳ್ಯ ಜಾರಿ ಮತ್ತು ತನಿಖೆರವರು ದಿನಾಂಕ:26.04.2007ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ. ರವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ದಿನಾಂಕ:25.06.2005ರಿಂದ ನಾನು ಜಾರಿ ಮತ್ತು ತನಿಖೆ ಮಂಗಳೂರು ದಕ್ಷಿಣ ಅಬಕಾರಿ ಉಪ

ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೇನೆ. ದಿನಾಂಕ:28.05.2005ರಂದು ಈ ಪ್ರಕರಣದ ಕಡತವನ್ನು ಮಂಗಳೂರು ಉಪ ವಿಭಾಗದ ಅ.ಉ.ನಿ ರಿಂದ ಪಡೆದುಕೊಂಡಿರುತ್ತೇನೆ. ದಿನಾಂಕ:23.06.2005ರಂದು ಈ ಪ್ರಕರಣದ 8 ಮಾದರಿ ಸೀಸೆಗಳನ್ನು ಹಾಗೂ ರಾಸಾಯನಿಕ ವಿಶ್ಲೇಷಣಾ ವರದಿಯನ್ನು ಪಡೆದುಕೊಂಡಿರುತ್ತೇನೆ. ದಿನಾಂಕ:24.12.2005ರಂದು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ವಶಪಡಿಸಿಕೊಂಡ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶಿಸುವಂತೆ ಕೋರಿ ಒಂದು ವರದಿಯನ್ನು ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು,ದ.ಕ ಮಂಗಳೂರು ಇವರಿಗೆ ಸಲ್ಲಿಸಿರುತ್ತೇನೆ. ಸದ್ರಿ ವರದಿಯನ್ನು ಈಗ ನೋಡಿದೆನು. ಅದನ್ನು ನಿಶಾನೆಪಿ–1 ಎಂದು ಗುರುತಿಸಲಾಯಿತು. ಈ ಪ್ರಕರಣಕ್ಕೆ ಸಂಬಂಧಿಸಿದ ಪ್ರ.ಮಾ.ವರದಿಯನ್ನು ನೋಡಿದೆನು. ಅದನ್ನು ನಿಶಾನೆಪಿ–2 ಎಂದು ಗುರುತಿಸಲಾಯಿತು. ಮಹಜರನ್ನು ಗುರುತಿಸಿದೆನು. ಅದನ್ನು ನಿಶಾನೆ ಪಿ–3 ಎಂದು ಗುರುತಿಸ ಲಾಯಿತು. ರಸಾಯನಿಕ ತಜ್ಞರ ವರದಿಯನ್ನು ನೋಡಿದೆನು ಅದನ್ನು ನಿಶಾನೆ ಪಿ–4 ಎಂದು ಗುರುತಿಸಲಾಯಿತು. ಪ್ರಕರಣದಲ್ಲಿ ತಯಾರಿಸಿದ ಸರ್ಚ್‌ಲಿಸ್ಟ್ ನೋಡಿದೆನು. ಅದನ್ನು ನಿಶಾನೆ ಪಿ–6 ಎಂದು ಗುರುತಿಸಲಾಯಿತು. ಈ ಪ್ರಕರಣದ ತನಿಖೆ ಮುಕ್ತಾಯಗೊಂಡ ನಂತರ ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ದೋಷಾರೋಪಣಾ ಪಟ್ಟಿಯನ್ನು ಸಲ್ಲಿಸಿರುತ್ತೇನೆ. ಇಲ್ಲಿಗೆ ಮುಖ್ಯ ವಿಚಾರಣೆ ಕೊನೆಗೊಂಡಿರುತ್ತದೆ.

**ಪಾಟೀ ಸವಾಲು:** ವಾಹನದ ಮಾಲೀಕರಾಗಲೀ, ಮಾಲೀಕರ ಪರ ವಕೀಲರಾಗಲೀ ಯಾರೂ ಹಾಜರಾಗದೇ ಇರುವುದರಿಂದ ಪಾಟೀ ಸವಾಲು ಇಲ್ಲ ಎಂದು ಪರಿಗಣಿಸಲಾಯಿತು.

**ಅಭಿಯೋಗದ ಪರ ಸಾಕ್ಷಿದಾರರನ್ನು ರಕ್ಷಣಾ ಪರ ವಕೀಲರಾದ ಶ್ರೀ ಕೆ. ಶಿವರಾಮ ಆಳ್ವ ಇವರು ಪಾಟೀ ಸವಾಲು ನಡೆಸಲಾಗಿ ಸಾಕ್ಷಿದಾರರು ಪಾಟೀ ಸವಾಲಿಗೆ ಉತ್ತರಿಸುತ್ತಾ:** ನಾನು ರಾಸಾಯನಿಕ ವಿಶ್ಲೇಷಕರಿಂದ ವಿಶ್ಲೇಷಣೆ ನಡೆಸಲಾದ ಸೀಲ್ ಮಾಡಿದ ಖಾಲಿ ಬಾಟಲಿಗಳನ್ನು ಹಿಂದಕ್ಕೆ ಪಡೆದಿರುತ್ತೇನೆ. ನಾನು ರಾಸಾಯನಿಕ ವಿಶ್ಲೇಷಕರ ವರದಿಯನ್ನು ಪರಿಶೀಲಿಸಿರುತ್ತೇನೆ. ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸುವ ಶೇಂದಿ ಮಾದರಿಯಲ್ಲಿ ಎಷ್ಟು ಪ್ರಮಾಣದ ಅಲ್ಕೋಹಾಲ್ ಇಥೆಲ್ ಮದ್ಯಸಾರ ಗುಣಮಟ್ಟ ಹೊಂದಿರಬೇಕಾಗಿ ನನಗೆ ತಿಳಿದಿರುವುದಿಲ್ಲ. ರಾಸಾಯನಿಕ ವಿಶ್ಲೇಷಣೆಗೆ ಕಳಿಸಿದಂತಹ ಶೇಂದಿ ಮಾದರಿಯು ಮಾನವ ಸೇವನೆಗೆ ಯೋಗ್ಯವಾಗಿರುವುದಿಲ್ಲವೆಂದು ನೀಡಿದ ವರದಿ ಸದ್ರಿ ಪ್ರಕರಣದಲ್ಲಿ ವಶಪಡಿಸಿಕೊಂಡಿರುವುದು ಶೇಂದಿಯೇ ಅಲ್ಲ ಎಂಬುದು ಸರಿಯಲ್ಲ, ವಶಪಡಿಸಿಕೊಂಡಿರುವ ಶೇಂದಿಯನ್ನು ನಾನು ಪರಿಶೀಲಿಸಿರುತ್ತೇನೆ. ಸದ್ರಿ ವಶಪಡಿಸಿರುವ ಶೇಂದಿಯನ್ನು ನಾಶಪಡಿಸಿದ ಸಮಯದಲ್ಲಿ ಅದರಲ್ಲಿ ಸತ್ತ ಇರುವೆಗಳು ಮತ್ತು ಇತರೆ ಕಶ್ಮಲಗಳು ಕ್ರಿಮಿಕೀಟಗಳಿಂದ ಕೂಡಿರುವುದಿಲ್ಲ, ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರ ಬಗ್ಗೆ ನಾನು ತನಿಖೆ ನಡೆಸಿರುವುದಿಲ್ಲ. ಈ ಪ್ರಕರಣದ ಇತರೆ ಆರೋಪಿಗಳನನ್ನು ತರಿಸಿ ಅವರಲ್ಲಿ ಯಾವುದೇ ತನಿಖೆ ಮಾಡಿರುವುದಿಲ್ಲ. ಈ ಪ್ರಕರಣದಲ್ಲಿ ಆರ್.ಸಿ ಮಾಲೀಕರು ದಾಖಲಾಗಿರುವುದೆಂದು ನಾನು ತಿಳಿಸಿರುತ್ತೇನೆ. ಸದ್ರಿ ವಾಹನದ ಆರ್.ಸಿ. ಮಾಲೀಕರ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ನೀಡಿರುವ ಬಿ ಎಕ್ಸ್ ಟ್ರಾಕ್ಟ್ ವರದಿಯನ್ನು ಆಧರಿಸಿ ಈ ಪ್ರಕರಣದಲ್ಲಿ ಅವರು ಅರೋಪಿ ಎಂಬುದನ್ನು ಸೇರಿಸಿರುತ್ತೇನೆ. ಪ್ರಕರಣದ ದಾಖಲೆಗಳ ಆಧಾರದಂತೆ ವಾಹನದ ಮಾಲೀಕರು ಈ ಪ್ರಕರಣಕ್ಕೆ ಸಂಬಂಧಿಸಿ ಆರೋಪಿ ಆಗಿರುತ್ತಾರೆ ಎಂಬ ಬಗ್ಗೆ ನಾನು ಯಾವುದೇ ದಾಖಲಾತಿಗಳನ್ನು ಸ್ಪಷ್ಟಪಡಿಸಿರುವುದಿಲ್ಲ. ನಾನು ಈ ಪ್ರಕರಣಕ್ಕೆ ಸಂಬಂಧಿಸಿ ಯಾವುದೇ ತನಿಖೆ ನಡೆಸದೇ ಸುಳ್ಳು ಅರೋಪಣಾ ಪಟ್ಟಿ ಸಲ್ಲಿಸಿರುವುದು ಎಂದರೆ ಸರಿಯಲ್ಲ ಎಂದು ಸಾಕ್ಷಿದಾರರು ರಕ್ಷಣಾ ಪರ ವಕೀಲರ ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

**ಪ್ರಾ.ಸ–2:**

ಪ್ರಾಸಿಕ್ಯೂಶನ್ ಪರ ಪ್ರಕರಣದ ಫಿರ್ಯಾದುದಾರರಾದ ಶ್ರೀ ಕೃಷ್ಣಪ್ಪ ಎಂ, ಅಬಕಾರಿ ಉಪ ನಿರೀಕ್ಷಕರು, ಮೆ:ಎ.ಜೆ ಡಿಸ್ಟಿಲರಿ, ಬೈಕಂಪಾಡಿರವರು ದಿನಾಂಕ:14.06.2009ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ. ರವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ, ಮೇ–2003 ರಿಂದ ಮೇ–2005 ರವರೆಗೆ ಮಂಗಳೂರು ಉಪ ವಿಭಾಗದಲ್ಲಿ ಅಬಕಾರಿ ಉಪ ನಿರೀಕ್ಷಕನಾಗಿ ಕರ್ತವ್ಯ ನಿರ್ವಹಿಸುತ್ತಿದ್ದೆನು. ದಿನಾಂಕ:05.04.2005ರಂದು ಬೆಳಿಗ್ಗೆ 11–30ರ ಸಮಯಕ್ಕೆ ಮಂಗಳೂರು ನೀರುಮಾರ್ಗ ಎಂಬಲ್ಲಿ ನಾನು ಸಿಬ್ಬಂದಿಯೊಂದಿಗೆ ಗಸ್ತು ಕರ್ತವ್ಯಕ್ಕಾಗಿ ನಮ್ಮ ಇಲಾಖಾ ವಾಹನದಲ್ಲಿ ಹೋಗುತ್ತಿದ್ದೆವು. ನಾವು ಹೋಗುವಾಗ ನಮ್ಮ ಎದುರಿನಿಂದ ಒಂದು ಆಟೋರಿಕ್ಷಾದಲ್ಲಿ ಭಾರವಾದ ವಸ್ತುವನ್ನು ಹೊಂದಿ ಬರುವುದನ್ನು ನೋಡಿದೆವು. ನಾವು ಅನುಮಾನದಿಂದ ಸದ್ರಿ ಆಟೋರಿಕ್ಷಾವನ್ನು ತಡೆದು ನಿಲ್ಲಿಸಿದಾಗ ಅದರಲ್ಲಿ ಒಬ್ಬ ಚಾಲಕ ಹಾಗೂ ಇನ್ನೊಬ್ಬ ವ್ಯಕ್ತಿ ಇರುವುದು ಕಂಡು ಬಂತು. ಸದ್ರಿ ಆಟೋದಲ್ಲಿ ರಿಕ್ಷಾವನ್ನು ಪರಿಶೀಲಿಸುವ ಮುನ್ನ ಕಾನೂನಿನಂತೆ ನ್ಯಾಯಾಲಯದಿಂದ ಸರ್ಚ್ ವಾರೆಂಟ್ ಪಡೆದುಕೊಳ್ಳಲು ಕಾಲಾವಕಾಶ ಇರಲಿಲ್ಲ. ಸ್ಥಳದಲ್ಲಿ ಕೂಡಲೇ ಒಂದು ಸರ್ಚ್ ಮೆಮೋ ತಯಾರಿಸಿ ವಾರೆಂಟ್ ಪಡೆಯದೇ ಇರುವುದಕ್ಕೆ ಕಾರಣಗಳನ್ನು ನಮೂದಿಸಿದೆವು ಸದ್ರಿ ಅಟೋ ರಿಕ್ಷಾದಲ್ಲಿದ್ದ ಕ್ಯಾನುಗಳಲ್ಲಿ ಒಟ್ಟು 8 ಕ್ಯಾ ನುಗಳನ್ನು ಪರಿಶೀಲಿಸಿ ನೋಡಲಾಗಿ ಅವುಗಳಲ್ಲಿ ಶೇಂದಿ ತುಂಬಿರುವುದು ಕಂಡು ಬಂತು. ಸದ್ರಿ ಶೇಂದಿ ತುಂಬಿದ ಕ್ಯಾನುಗಳನ್ನು ಆಟೋರಿಕ್ಷಾದಲ್ಲಿ ಸಾಗಾಟ ಮಾಡಲು ಯಾವುದೇ ಪರವಾನಿಗೆ ಚಾಲಕನ ಅಥವಾ ಇನ್ನೊಬ್ಬ ವ್ಯಕ್ತಿಯ ಬಳಿಯಲ್ಲಿ ಇರಲಿಲ್ಲ. ವಾಹನದ ಚಾಲಕನು ತಾನು ಬಾಡಿಗೆಗಾಗಿ ಸದ್ರಿ ಶೇಂದಿಯನ್ನು ಅಟೋದಲ್ಲಿ ಸಾಗಿಸುವುದಾಗಿ ತಿಳಿಸಿದನು. ಆಟೋದಲ್ಲಿದ್ದ 8 ಕ್ಯಾನುಗಳನ್ನು ರಿಕ್ಷಾದಿಂದ ಇಳಿಸಿ ಪರಿಶೀಲಿಸಿದೆವು. ಪ್ರತಿ ಕ್ಯಾನಿನಿಂದ 375 ಮಿಲಿ ಲೀಟರ್ ಗಾತ್ರದ ಸೀಸೆಯಲ್ಲಿ ಶೇಂದಿಯನ್ನು

ತೆಗೆದು ಒಟ್ಟು 8 ಮಾದರಿ ಸೀಸೆಗಳನ್ನು ತಯಾರಿಸಿ ಅವುಗಳ ಬಾಯಿಗೆ ಬಟ್ಟೆ ಕಟ್ಟಿ ನಮ್ಮ ಇಲಾಖಾ ಸೀಲನ್ನು ಮುದ್ರಿಸಿದೆವು. ಸ್ಥಳದಲ್ಲಿ ಮಾದರಿ ಸೀಲನ್ನು ತಯಾರಿಸಿದೆವು. ಸ್ಥಳದಲ್ಲಿ ಒಂದು ಮಹಜರನ್ನು ತಯಾರಿಸಿ, ಸ್ಥಳದಲ್ಲಿ ಆರೋಪಿತರನ್ನು ಹಾಗೂ ಸೊತ್ತುಗಳನ್ನು ವಶಕ್ಕೆ ಪಡೆದುಕೊಂಡು ನಮ್ಮ ಮಂಗಳೂರಿನ ಉಪ ವಿಭಾಗದ ಕಛೇರಿಗೆ ಬಂದೆವು. ಅಲ್ಲಿ ಒಂದು ಪ್ರ.ಮಾ.ವ ನ್ನು ತಯಾರಿಸಿ ಜೆ.ಎಂ.ಎಫ್. ಸಿ ನ್ಯಾಯಾಲಯಕ್ಕೂ ಪ್ರತಿಗಳನ್ನು ನಮ್ಮ ಮೇಲಾಧಿಕಾರಿಗಳಿಗೂ ಸಲ್ಲಿಸಿರುತ್ತೇನೆ. ಆರೋಪಿತರನ್ನು ಜಾಮೀನಿನ ಮೇಲೆ ಬಿಡುಗಡೆಗೊಳಿಸಿರುತ್ತೇನೆ. ದಿನಾಂಕ:18.04.2005ರಂದು ಈ ಪ್ರಕರಣದ ಕೋರಿಕೆ ಪತ್ರ ಮತ್ತು ಮಾದರಿ ಸೀಸೆಗಳನ್ನು ಶ್ರೀ.ಪ್ರೇಮಾನಂದ, ಅಬಕಾರಿ ರಕ್ಷಕ ಇವರ ಮುಖಾಂತರ ರಾಸಾಯನಿಕ ತಜ್ಞರು, ಮಂಗಳೂರು ಇವರ ಕಛೇರಿಗೆ ಕಳುಹಿಸಿದೆನು. ನಂತರ ದಿನಾಂಕ:28.05.2005ರಂದು ಈ ಪ್ರಕರಣದ ಕಡತವನ್ನು ಕೃಷ್ಣ ನಾಯಕ್ ಅಬಕಾರಿ ಉಪ ನಿರೀಕ್ಷಕರು ಇವರಿಗೆ ಮುಂದಿನ ತನಿಖೆಗಾಗಿ ಹಸ್ತಾಂತರಿಸಿರುತ್ತೇನೆ. ನಿಶಾನೆ ಪಿ–6ರಲ್ಲಿ ರುವರ ಸಹಿಯು ನನ್ನದಾಗಿರುತ್ತದೆ. ಶೋಧನಾ ಪಟ್ಟಿ ನಿಶಾನೆ ಪಿ–5 ಇದ್ದು ಅದರಲ್ಲಿ ನನ್ನ ಸಹಿ ಇರುತ್ತದೆ. ನಿಶಾನೆ ಪಿ–3 ಸ್ಥಳ ಮಹಜರು ಇದ್ದು ಅದರಲ್ಲಿ ನನ್ನ ಸಹಿ ಇದೆ. ನಿಶಾನೆ ಪಿ–2 ಪ್ರಥಮ ಮಾಹಿತಿ ವರದಿ ಆಗಿದ್ದು, ಅದರಲ್ಲಿ ನನ್ನ ಸಹಿ ಇರುತ್ತದೆ. ಪ್ರಕರಣದಲ್ಲಿ ಅಬಕಾರಿ ಕಾಯ್ದೆ ಕಲಂ 43ಎ ಯಡಿಯಲ್ಲಿ ಒಂದು ವರದಿಯನ್ನು ಅಧಿಕೃತ ಅಧಿಕಾರಿಗಳಿಗೆ ಸಲ್ಲಿಸಿದ್ದು ಅದನ್ನು ನಿಶಾನೆ ಪಿ–7 ಎಂದು ಗುರುತಿಸಿ ಪ್ರಾ.ಸಾ–2ರವರ ಸಾಕ್ಷಿ ವಿಚಾರಣೆಯನ್ನು ಕೊನೆ ಗೊಳಿಸಲಾಗಿರುತ್ತದೆ.

ಪ್ರಾ.ಸಾ–2 ರವರನ್ನು ರಕ್ಷಣಾ ಪರ ವಕೀಲರಾದ ಶ್ರೀ ಕೆ.ಎಸ್.ಆಳ್ವ ಇವರು ಪಾಟೀಸವಾಲು ನಡೆಸಿದ್ದು ಸಾಕ್ಷಿದಾರರು ಪಾಟೀ ಸವಾಲಿಗೆ ಉತ್ತರಿಸುತ್ತಾ ಪ್ರಕರಣದಲ್ಲಿ ಮೊದಲೇ ಖಚಿತ ವರ್ತಮಾನ ಬಂದಿರುವುದಿಲ್ಲ. ಆ ದಿನ ಕುಲಶೇಖರ ಜಂಕ್ಷನ್‌ನಿಂದ ಮೂಡಬಿದ್ರೆ ಹೋಗುವ ರಸ್ತೆಯಲ್ಲಿ ಹೋಗುತ್ತಿದ್ದೆವು. ಕುಲಶೇಖರ ಕಡೆಯಿಂದ ನೀರುಮಾರ್ಗ ಹೋಗುವಾಗ ನಾವು ರಸ್ತೆಯ ಎಡಬದಿಯಲ್ಲಿ ಹೋಗುತ್ತಿದೆವು. ನೀರುಮಾರ್ಗದ ಕಡೆಯಿಂದ ಕುಲಶೇಖರದ ಕಡೆಗೆ ಬರಬೇಕಾದರೆ ನಮ್ಮ ಬಲ ಬದಿಯಿಂದ ಬರಬೇಕಾಗುತ್ತದೆ. ಕುಲಶೇಖರ ರಸ್ತೆಯಲ್ಲಿ ಸಾಕಷ್ಟು ವಾಹನಗಳು ಓಡಾಡುತ್ತಿರುತ್ತದೆ. ನಾವು ಪ್ರಕರಣದ ವಾಹನವನ್ನು ಶೋಧಿಸುವ ಮೊದಲು ಬೇರೆ ವಾಹನಗಳನ್ನು ಪರಿಶೀಲಿಸಿರುತ್ತೇವೆ. ತಕ್ಷೀರು ಸ್ಥಳವು ರಾಷ್ಟ್ರೀಯ ಹೆದ್ದಾರಿಯಾಗಿರುವುದಿಲ್ಲ. ನಮ್ಮನ್ನು ನೋಡಿದ ತಕ್ಷಣ ವಾಹನದಲ್ಲಿದ್ದವರು ಓಡಲು ಪ್ರಯತ್ನಿಸಿರುವುದಿಲ್ಲ, ವಾಹನವನ್ನು ಶೋದನೆ ಮಾಡುವ ಸಮಯ ವಾಹನದ ಹತ್ತಿರ ಜನರು ಸೇರಲಿಲ್ಲ. ಆ ದಿನ ಸಿಬ್ಬಂದಿ ಸೇರಿ ಒಟ್ಟು 4 ಜನ ಇದ್ದೆವು. ಪ್ರಕರಣದ ಸಂದರ್ಭದಲ್ಲಿ ಇದ್ದ ಇಲಾಖಾ ವಾಹನದ ನೊಂದಣಿ ಸಂಖ್ಯೆ ಮಹಜರಿನಲ್ಲಿ ನಮೂದಿಸಿಲ್ಲ. ಇಲಾಖಾ ವಾಹನದ ಚಾಲಕರ ಸಹಿಯನ್ನು ಮಹಜರಿನಲ್ಲಿ ಪಡೆದುಕೊಳ್ಳಲಿಲ್ಲ. ಮಹಜರು ಮಾಡುವಾಗ ಸ್ವತಂತ್ರ ಸಾಕ್ಷಿದಾರರು ಲಭ್ಯವಿಲ್ಲದೇ ಇರುವುದರಿಂದ ಅವರ ಸಹಿಯನ್ನು ಪಡೆದುಕೊಂಡಿಲ್ಲ. ತಕ್ಷೀರು ಸ್ಥಳವು ರಾಷ್ಟ್ರೀಯ ಹೆದ್ದಾರಿಯಿಂದ ಎಷ್ಟು ದೂರದಲ್ಲಿದೆ ಎಂದು ಖಚಿತವಾಗಿ ಹೇಳಲಾಗುವುದಿಲ್ಲ. ಶೇಂದಿಯಲ್ಲಿ ಮದ್ಯಸಾರ ಶೇಕಡಾ ಎಷ್ಟು ಇರಬೇಕಾಗಿದೆ ಎಂದು ನನಗೆ ಗೊತ್ತಿಲ್ಲ. ವಾಸನೆ ಆಧಾರದ ಮೇಲೆ ಅದು ಶೇಂದಿ ಎಂದು ಅಭಿಪ್ರಾಯ ಪಟ್ಟಿರುತ್ತೇನೆ. ಮಾದರಿ ಸೀಸೆಯನ್ನು ತಯಾರಿಸುವ ಸಂದರ್ಭದಲ್ಲಿ ಶೇಂದಿಯಲ್ಲಿ ಯಾವುದೇ ಕ್ರಿಮಿಗಳು ಇದ್ದವೋ, ಇಲ್ಲವೋ ಎಂಬುದನ್ನು ಗಮನಿಸಿಲ್ಲ. ಆ ದಿವಸ ಯಾವುದೇ ರೀತಿಯ ಮುದ್ದೆ ಮಾಲನ್ನು ವಶಪಡಿಸಿಕೊಂಡಿಲ್ಲ ಎಂಬುವುದು ಸರಿಯಲ್ಲ. ತಕ್ಷೀರು ಸ್ಥಳದಿಂದ ಮಂಗಳೂರು ಗ್ರಾಮಾಂತರ ಪ್ರದೇಶ ಎಷ್ಟು ದೂರದಲ್ಲಿದೆ ಎಂದು ನನಗೆ ಗೊತ್ತಿಲ್ಲ. ಕುಲಶೇಖರ ಜಂಕ್ಷನ್‌ನಿಂದ ನೀರುಮಾರ್ಗಕ್ಕೆ ಹೋಗುವ ರಸ್ತೆ ಎತ್ತರದಲ್ಲಿದೆ ಎನ್ನುವುದು ಸರಿ, ನಮ್ಮ ವಾಹನ ತಾಸಿಗೆ 40 ಕಿ.ಮಿ ವೇಗದಲ್ಲಿ ಸಂಚರಿಸುತ್ತಿತ್ತು. ಸದ್ರಿ ಆಟೋರಿಕ್ಷಾ ನಿಧಾನಕ್ಕೆ ಬರುತ್ತಿತ್ತು. ತಕ್ಷೀರು ಸ್ಥಳದ ಸಿಬ್ಬಂಧಿಯನ್ನು ಮಹಜರಿನಲ್ಲಿ ನಮೂದಿಸಿಲ್ಲವೆಂದರೆ ಸರಿ. ವಾಹನಕ್ಕೆ ಸಂಬಂಧಿಸಿದ ಆರ್.ಸಿ ಪುಸ್ತಕವನ್ನು ಪರಿಶೀಲಿಸಿದೆವು. ಸದ್ರಿ ಅಟೋ ಲ್ಯಾಂಬಿ ಕಂಪನಿಗೆ ಸಂಬಂಧಪಟ್ಟಿದ್ದು. ಸದ್ರಿ ವಿಷಯವನ್ನು ಮಹಜರಿನಲ್ಲಿ ನಮೂದಿಸಿಲ್ಲ. ವಾಹನದ ಚಾಲಕನು ತಾನು ಬಾಡಿಗೆಗಾಗಿ ಬಂದಿರುತ್ತೇನೆ ಎಂದು, ತಾನು ನಿರಪಾರಾಧಿ ಎಂದು ಹೇಳಿದ್ದಾನೆ. ನಾನು ಆ ದಿವಸ ತಕ್ಷೀರು ಸ್ಥಳಕ್ಕೆ ಹೋಗಲಿಲ್ಲ ಎಂದು ಹೇಳುವುದು ಸರಿಯಲ್ಲ. ನಾನು ತಕ್ಷೀರು ಸ್ಥಳಕ್ಕೆ ಹೋದದ್ದೇ ಇಲ್ಲ ಎಂದು ಹೇಳುವುದು ಸರಿಯಲ್ಲ, ತಕ್ಷೀರು ಸ್ಥಳಕ್ಕೆ ಹೋಗದೇ ಇರುವುದರಿಂದ ನಾನು ಯಾವುದೇ ಸ್ವತಂತ್ರ ಸಾಕ್ಷಿದಾರರ ಸಹಿಯನ್ನು ಪಡೆದುಕೊಂಡಿಲ್ಲ ಎಂದು ಹೇಳುವುದು ಸರಿಯಲ್ಲ .ಇಲ್ಲಿಗೆ ಪಾಟೀ ಸವಾಲು ಕೊನೆಗೊಂಡಿರುತ್ತದೆ.

**ಪ್ರಾ.ಸ–3:**

ಪ್ರಾಸಿಕ್ಯೂಶನ್ ಪರ ಸಾಕ್ಷಿದಾರರಾದ ಶ್ರೀ ಪ್ರೇಮಾನಂದ, ಅಬಕಾರಿ ರಕ್ಷಕ ಇವರು ದಿನಾಂಕ:14.06.2009ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಎ.ಡಿ.ಪಿ ರವರ ಮುಖ್ಯ ವಿಚಾರಣೆಗೆ ಉತ್ತರವನ್ನು ನೀಡುತ್ತಾ ದಿನಾಂಕ:18.04.2005ರಂದು ಈ ಪ್ರಕರಣದ 8 ಮಾದರಿ ಸೀಸೆಗಳನ್ನು ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ ಇವರಿಂದ ಕೋರಿಕೆ ಪತ್ರ ದೊಂದಿಗೆ ಪಡೆದುಕೊಂಡು ಅದೇ ದಿನ ಮಂಗಳೂರಿನ ರಾಸಾಯನಿಕ ತಜ್ಞರ ಕಛೇರಿಗೆ ತಲುಪಿಸಿದ್ದೆನು. ದಿನಾಂಕ:23.06.2005 ರಂದು ಪರೀಕ್ಷಿಸಿದ ಮಾದರಿ ಸೀಸೆಗಳನ್ನು ತಜ್ಞರ ವರದಿ ಯೊಂದಿಗೆ ಪಡೆದುಕೊಂಡು ನಮ್ಮ ಕಛೇರಿಗೆ ತಲುಪಿಸಿರುತ್ತೇನೆ ಎಂದು ಮುಖ್ಯ ವಿಚಾರಣೆ ವೇಳೆಯಲ್ಲಿ ಸಾಕ್ಷಿ ನೀಡಿರುತ್ತಾರೆ.

**ಪ್ರಾ.ಸಾ–3** ರಕ್ಷಣಾ ಪರ ವಕೀಲರಾದ ಶ್ರೀ ಕೆ.ಎಸ್.ಆಳ್ವ ಇವರು ಪಾಟೀಸವಾಲು ನಡೆಸಿದ್ದು, ಸಾಕ್ಷಿದಾರರು ಪಾಟೀ ಸವಾಲಿಗೆ ಉತ್ತರಿಸುತ್ತಾ ಮಾದರಿ ಸೀಸೆಗಳನ್ನು ಕೊಂಡುಹೋಗುವಾಗ ಅದರ ಮುಚ್ಚಳ ಬಟ್ಟೆಯಿಂದ ಸುತ್ತಿ ಸೀಲ್

ಮಾಡಲಾಗಿತ್ತು. ತಜ್ಞರು ಪರೀಕ್ಷಿಸಿದ ನಂತರ ಸದ್ರಿ ಸೀಸೆಗಳನ್ನು ತರುವಾಗ ಸೀಸೆಗಳಲ್ಲಿದ್ದ ಶೇಂದಿ ನನಗೆ ಕಾಣುತ್ತಿತ್ತು,ಅದರಲ್ಲಿ ಕ್ರಿಮಿಗಳು ಇರುವುದು ನನಗೆ ಕಂಡಿಲ್ಲ ,ವಾಸನೆಯು ಕೂಡಾ ಬರುತ್ತಿರಲಿಲ್ಲ. ನಾನು ಈ ತಕ್ಷೀರಿಗೆ ಸಂಬಂಧಪಟ್ಟ ಯಾವುದೇ ಮಾದರಿ ಸೀಸೆಗಳನ್ನು ತಜ್ಞರಲ್ಲಿಗೆ ಕೊಂಡೊಯ್ಯಲಿಲ್ಲ ಎನ್ನುವುದು ಸರಿಯಲ್ಲ ವೆಂದು ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

**ರಕ್ಷಣಾ ಸಾಕ್ಷಿ ವಿಚಾರಣೆ:**

**ಡಿಡಬ್ಲ್ಯೂ–1** ಪ್ರಕರಣದಲ್ಲಿ ಜಪ್ತಾದ ವಾಹನದ ಆರ್.ಸಿ. ಮಾಲೀಕರಾದ ಶ್ರೀ ವಲೇರಿಯನ್ ಮಸ್ಕರೇನಸ್ ಇವರು ದಿನಾಂಕ:25.02.2009ರಂದು ತಮ್ಮ ರಕ್ಷಣಾ ಸಾಕ್ಷಿಯನ್ನು ನೀಡುತ್ತಾ ನಾನು ಸಿ.ಟಿ.ಎಕ್ಸ್ –8329 ಲಾಮ್ರೆಟಾ ಆಟೋರಿಕ್ಷಾದ ಮಾಲಿಕನಾಗಿರುತ್ತೇನೆ. ಸದ್ರಿ ವಾಹನವನ್ನು ಜೀವನೋಪಯೋಗಕ್ಕಾಗಿ ತೆಗೆದು ಕೊಂಡಿರುತ್ತೇನೆ. ಸದ್ರಿ ಆಟೋರಿಕ್ಷಾವನ್ನು ನಾನೇ ಚಾಲನೆ ಮಾಡುತ್ತಿದ್ದೇನೆ ಅದಲ್ಲದೇ ನನಗೆ ಪೆಯಿಂಟ್ ಕೆಲಸ ಕೂಡಾ ಇದೆ. ದಿನಾಂಕ:05.04.2005 ರಂದು ಸದ್ರಿ ವಾಹನವನ್ನು ನನ್ನ ಮನೆಯ ಹತ್ತಿರದ ಸಿರಿಲ್ ಎಂಬವರಿಗೆ ಬಾಡಿಗೆಗೆ ಕೊಟ್ಟಿರುತ್ತೇನೆ.

ಸದ್ರಿ ಸಿರಿಲ್ ಎನ್ನುವ ವ್ಯಕ್ತಿಗೆ ವಾಹನವನ್ನು ಕೊಡುವಾಗ ಕಾನೂನುಬಾಹಿರವಾಗಿ ಯಾವುದೇ ವಸ್ತುವನ್ನು ಸಾಗಾಟ ಮಾಡಬಾರದಾಗಿ ತಿಳಿಸಿರುತ್ತೇನೆ. ಸದ್ರಿ ವ್ಯಕ್ತಿಯನ್ನು ನಾನು 20 ವರ್ಷದಿಂದ ತಿಳಿದಿರುತ್ತೇನೆ. ಸಿರಿಲ್ ಎಂಬವರ ಮನೆ ನಮ್ಮ ಮನೆಯಿಂದ 2 ಕಿ.ಮೀ ದೂರದಲ್ಲಿದೆ. ದಿನಾಂಕ:20.05.2005ರಂದು ಸದ್ರಿ ವಾಹನವನ್ನು ಸಂಜೆ ಮನೆಗೆ ತಂದು ನಿಲ್ಲಿಸದ ಕಾರಣ ಮರುದಿವಸ ಬೆಳಿಗ್ಗೆ ವಿಚಾರಿಸಿದಾಗ ವಾಹನವು ಬಿಜೈ ಅಬಕಾರಿ ಇಲಾಖೆಯಲ್ಲಿದೆ ಎಂದು ತಿಳಿಸಿದರು. ಸದ್ರಿ ವಾಹನದಲ್ಲಿ ಶೇಂದಿ ಸಾಗಾಟ ಮಾಡುತ್ತಿದ್ದರು ಎಂದು ಕೇಸು ಹಾಕಿದರು ಎಂದು ಸಿರಿಲ್‌ರವರು ನನಗೆ ತಿಳಿಸಿರುತ್ತಾರೆ. ಸದ್ರಿ ತಕ್ಷೀರಿನಲ್ಲಿ ಪ್ರತ್ಯಕ್ಷವಾಗಿ ಯಾಗಲೀ ಅಥವಾ ಪರೋಕ್ಷವಾಗಿ ಯಾಗಲೀ ನಾನು ಶಾಮೀಲಾಗಿರುವುದಿಲ್ಲ. ತಕ್ಷೀರಿಗೆ ಸಂಬಂಧಿಸಿದಂತೆ ನನಗೆ ಈ ತನಕ ನ್ಯಾಯಾಲಯದಿಂದ ಯಾವುದೇ ಸಮನ್ಸ್ ಬಂದಿರುವುದಿಲ್ಲ. ವಾಹನದ ವಿರುದ್ಧ ದಾಖಲಾದ ಮೊಕದ್ದಮೆಯನ್ನು ರದ್ದುಗೊಳಿಸಿ ವಾಹನವನ್ನು ನನಗೆ ಕೊಡಬೇಕಾಗಿ ಕೋರುತ್ತಾ ಮುಖ್ಯ ವಿಚಾರಣೆ ವೇಳೆ ಹೇಳಿಕೆ ನೀಡಿರುತ್ತಾರೆ.

ರಕ್ಷಣಾ ಸಾಕ್ಷಿದಾರರನ್ನು ಸರ್ಕಾರಿ ಅಭಿಯೋಜಕರು ಪಾಟೀ ಸವಾಲು ನಡೆಸಲಾಗಿ ರಕ್ಷಣಾ ಸಾಕ್ಷಿದಾರರು ಸಾಕ್ಷಿ ನುಡಿಯುತ್ತಾ ಸಿರಿಲ್ ಮಸ್ಕರೇನಸ್ ನನ್ನ ಸಂಬಂಧಿಕರಲ್ಲ. ನನ್ನ ರಿಕ್ಷಾ ಚಾಲಕ ಸಿರಿಲ್ ಕಳೆದ 17 ವರ್ಷಗಳಿಂದ ಪ್ರತಿ ದಿವಸ ಬೆಳಿಗ್ಗೆ ರಿಕ್ಷಾವನ್ನು ಬಾಡಿಗೆಗೆ ತೆಗೆದುಕೊಂಡು ಹೋಗಿ ಸಂಜೆ ತಂದು ಕೊಡುತ್ತಿದ್ದ. ದಿನಕ್ಕೆ ರೂ.50 ಬಾಡಿಗೆ ಕೊಡುತ್ತಿದ್ದ. ನಾನು ಸೆಂಟ್ರಿಂಗ್ ಕೆಲಸಕ್ಕೆ ಹೋಗುತ್ತೇನೆ. ನನಗೆ ಸೆಂಟ್ರಿಂಗ್ ಕೆಲಸದಿಂದ ದಿನಕ್ಕೆ ರೂ.250/– ಬರುತ್ತದೆ. ಈ ಘಟನೆಗಿಂತ ಮೊದಲು ನನ್ನ ಆಟೋರಿಕ್ಷಾದ ಮೇಲೆ ಯಾವುದೇ ಅಬಕಾರಿ ಪ್ರಕರಣ ದಾಖಲಾಗಿರುವುದಿಲ್ಲ. ಅಬಕಾರಿ ಇಲಾಖಾ ಅಧಿಕಾರಿಗಳಿಗೆ ನನ್ನ ಮೇಲೆ ಯಾವುದೇ ದ್ವೇಷ ಇರುವುದಿಲ್ಲ. ಅದೇ ರೀತಿ ಸಿರಿಲ್ ಮೇಲೆ ಸಹ ಇರುವುದಿಲ್ಲ. ನನ್ನ ಗಳಿಕೆ ನಮ್ಮ ಸಂಸಾರ ಸಾಗಿಸಲು ಸಾಕಾಗುವುದಿಲ್ಲ ಎಂದರೆ ಸರಿ, ಅದಕ್ಕೋಸ್ಕರ ನಾನು ಸಿರಿಲ್ ಮುಖಾಂತರ ಅಕ್ರಮ ಶೇಂದಿ ಸಾಗಾಟ ದಂದೆಗೆ ಇಳಿದಿದ್ದೆ ಎಂದರೆ ಸರಿಯಲ್ಲ, ನನಗೆ ನನ್ನ ಚಾಲಕ ಸಿರಿಲ್‌ರವರು ಶೇಂದಿ ಸಾಗಾಟ ಮಾಡುವುದು ನನಗೆ ಗೊತ್ತಿದ್ದರೂ, ನಾನು ಉದ್ದೇಶ ಪೂರ್ವಕವಾಗಿ ಅವನನ್ನು ನೇಮಿಸಿದ್ದೆ ಎಂದರೆ ಸರಿಯಲ್ಲ, ವಾಹನವನ್ನು ನನ್ನ ವಶಕ್ಕೆ ಪಡೆಯಲು ಸುಳ್ಳು ಸಾಕ್ಷಿ ಹೇಳುತ್ತಿದ್ದೇನೆ ಎಂದರೆ ಸರಿಯಲ್ಲ ಎಂದು ಸರ್ಕಾರಿ ಅಭಿಯೋಜಕರ ಪಾಟೀ ಸವಾಲಿಗೆ ಉತ್ತರಿಸಿರುತ್ತಾರೆ.

ಪ್ರಾಧಿಕಾರದಲ್ಲಿ ಲಭ್ಯವಾಗಿರುವ ದಾಖಲಾತಿಗಳ ಪ್ರಕಾರ ದಿನಾಂಕ:05.04.2005 ರಂದು ಆಟೋರಿಕ್ಷಾ ನೊಂದಣಿ ಸಂ:CTX-8329 ಇದರಲ್ಲಿ ಅಕ್ರಮ ಶೇಂದಿಯನ್ನು ಸಾಗಾಟ ಮಾಡುತ್ತಿದ್ದುದನ್ನು ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗರವರು ಪತ್ತೆಹಚ್ಚಿ, ಪ್ರ.ಮಾ.ವ ಸಂ:19/2004–05ರ ಪ್ರಕಾರ ಪ್ರಕರಣ ದಾಖಲಿಸಿಕೊಂಡು, ರಹದಾರಿ ರಹಿತ ಶೇಂದಿ ಸಾಗಾಣಿಕೆಗೆ ಬಳಸಲಾದ ಆಟೋರಿಕ್ಷಾ ಮತ್ತು ಶೇಂದಿಯನ್ನು ಸ್ಥಳ ಮಹಜರು, ಪಂಚನಾಮೆಯ ಮುಖೇನಾ ಸ್ವಾಧೀನಪಡಿಸಿದ್ದು, ಕರ್ನಾಟಕ ಅಬಕಾರಿ ಕಾಯಿದೆ 1965ರ ಕಲಂ 11, 12, 14(2) ರ ಪ್ರಕಾರ ಅಪರಾಧ ಹಾಗೂ ಅಬಕಾರಿ ಕಾಯಿದೆ (ಶೇಂದಿ ಉತ್ತಾರು ನಿಯಮ 1991ರ ನಿಯಮ 22 ರ ಉಲ್ಲಂಘನೆ ಮತ್ತು ಕಲಂ 34 ಮತ್ತು 38(ಎ) ರ ಪ್ರಕಾರ ಶಿಕ್ಷಾರ್ಹ ಹಾಗೂ ವಾಹನದಲ್ಲಿ ಜಪ್ತು ಮಾಡಲ್ಪಟ್ಟಿರುವ ಶೇಂದಿಯ ಮಾದರಿಗಳು ರಾಸಾಯನಿಕ ತಜ್ಞರ ವರದಿಯಂತೆ 1.25% ಮದ್ಯಸಾರದ ಅಂಶವಿರುವ ಕ್ರಿಮಿ ಕೀಟಗಳಿರುವ ಕೆಟ್ಟ ವಾಸನೆಯಿಂದ ಕೂಡಿದ ಮಾನವನ ಸೇವನೆಗೆ ಯೋಗ್ಯವಲ್ಲದ ವಸ್ತುವೆಂದು ದೃಢಪಟ್ಟಿರುವುದರಿಂದ, ಹಾಗೂ ವಾಹನದ ಮಾಲೀಕರು ತನ್ನ ನಿರುಪರಾಧಿತ್ವವನ್ನು ಸಾಬೀತುಪಡಿಸಲು ಪುರಾವೆಗಳನ್ನು ಒದಗಿಸಲು ವಿಫಲರಾಗಿರುವುದನ್ನು ಈ ಪ್ರಾಧಿಕಾರವು ಮನಗಂಡು ವಾಹನದ ಮುಟ್ಟುಗೋಲು ನಡವಳಿ ಬಗ್ಗೆ ಒಂದನೇ ಅಂಶಕ್ಕೆ ಗುಣಾತ್ಮಕವಾಗಿ ತೀರ್ಮಾನ ತೆಗೆದು ಕೊಳ್ಳಬೇಕಾಗಿರುತ್ತದೆ.

ವಾಹನದ ಮುಟ್ಟುಗೋಲು ನಡವಳಿ ವಿಚಾರಣೆ ಸಂದರ್ಭದಲ್ಲಿ ಫಿರ್ಯಾದುದಾರರು ಹಾಗೂ ಇತರ ಅಭಿಯೋಗದ ಸಾಕ್ಷಿದಾರರ ಹೇಳಿಕೆಗಳನ್ನು ಸವಿಸ್ತರವಾಗಿ ಪರಿಶೀಲಿಸಿ ಹಾಗೂ ರಕ್ಷಣಾ ಪರ ಸಾಕ್ಷ್ಯ ನೀಡಿದ ವಾಹನದ ಮಾಲೀಕರು ತನ್ನ ಆಟೋರಿಕ್ಷಾ ವಾಹನವನ್ನು ಬಾಡಿಗೆಗೆ ಚಲಾಯಿಸುವರೇ ಇನ್ನೊಬ್ಬ ವ್ಯಕ್ತಿಯನ್ನು ಚಾಲಕನನ್ನಾಗಿ ನೇಮಿಸಿ, ಸಾರ್ವಜನಿಕ ಬಾಡಿಗೆಗೆ ನೀಡಿರುವುದಾಗಿ ಹಾಗೂ ಸದ್ರಿ ಅಪರಾಧಕ್ಕೂ, ತನಗೂ ಯಾವುದೇ ಸಂಬಂಧ ವಿಲ್ಲವೆಂದು ತನ್ನ ರಕ್ಷಣಾ ಸಾಕ್ಷಿಯಲ್ಲಿ ತಿಳಿಸಿರುವುದಾದರೂ, ತನ್ನ ವಾಹನಕ್ಕೆ ಚಾಲಕನನ್ನು ನೇಮಿಸುವ ಸಂದರ್ಭದಲ್ಲಿ ಯಾವುದೇ ದಾಖಲೆಗಳನ್ನು

ತಯಾರಿಸಿರುವುದಿಲ್ಲ ಹಾಗೂ ವಾಹನವನ್ನು ಯಾವುದೇ ಅಕ್ರಮ ಚಟುವಟಿಕೆಗಳಿಗೆ ಬಳಸಬಾರದೆಂಬ ಮುಂಜಾಗ್ರತಾ ಸೂಚನೆಗಳನ್ನು ನೀಡಿರುವ ಬಗ್ಗೆ ಯಾವುದೇ ದಾಖಲೆ ಪುರಾವೆಗಳನ್ನು ಒದಗಿಸಿರುವುದಿಲ್ಲ. ಹಾಗೂ ತನ್ನ ಹೇಳಿಕೆಗಳಲ್ಲಿ ಸತ್ಯಾಂಶವಿರುವುದನ್ನು ಸಾಭೀತುಪಡಿಸಲು ಪುರಾವೆಗಳನ್ನು ಒದಗಿಸಿರುವುದಿಲ್ಲ. ಇದರಿಂದ ವಾಹನದ ಮಾಲೀಕನು ಅಕ್ರಮವಾಗಿ ಶೇಂದಿಯನ್ನು ತನ್ನ ವಾಹನದಲ್ಲಿ ಉದ್ದೇಶಪೂರ್ವಕವಾಗಿ ಸಾಗಾಟ ಮಾಡಲು ಬಳಸಿಕೊಂಡು ಪ್ರಕರಣದಲ್ಲಿ ಸಿಲುಕಿಕೊಂಡ ನಂತರದಲ್ಲಿ ತನ್ನ ಅಪರಾಧವನ್ನು ಮರೆಮಾಚುವ ದೃಷ್ಟಿಯಿಂದ ರಕ್ಷಣಾ ಹೇಳಿಕೆಯನ್ನು ನೀಡಲು ಮುಂದಾಗಿರುವುದನ್ನು ಮನಗಂಡು ವಾಹನದಲ್ಲಿ ಅಕ್ರಮ ಶೇಂದಿ ಯನ್ನುಸಾಗಾಟ ಮಾಡಿರುವುದು ಸಾಭೀತಾಗಿರುವುದಾಗಿ ಅಭಿಪ್ರಾಯಪಡಲಾಗಿರುತ್ತದೆ.

ಈ ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿದಾಗ ಅಬಕಾರಿ ಉಪ ನಿರೀಕ್ಷಕರು ಮಂಗಳೂರು ಉಪ ವಿಭಾಗ, ಮಂಗಳೂರು ಇವರು ವಶಪಡಿಸಿಕೊಂಡ ವಾಹನ ಆಟೋರಿಕ್ಷಾ ನೊಂದಣಿ ಸಂ:CTX-8329ನ್ನು ವಶಪಡಿಸಿಕೊಂಡು ಸುಮಾರು 4 ವರ್ಷ 3 ತಿಂಗಳಿಗಿಂತ ಹೆಚ್ಚು ಸಮಯ ಕಳೆದಿದ್ದು, ವಾಹನದ ಮಾಲೀಕರು ಕಾನೂನುಬದ್ಧವಾಗಿ ಸೂಕ್ತ ದಾಖಲಾತಿಗಳೊಂದಿಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ, ತನ್ನ ನಿರಾಪರಾಧಿತ್ವವನ್ನು ಸಾಭೀತುಪಡಿಸಲು ವಿಫಲರಾಗಿರುವುದು ಹಾಗೂ ಈ ಪ್ರಾಧಿಕಾರದಲ್ಲಿ ನಡೆಸಲಾದ ಸಾಕ್ಷಿಗಳ ವಿಚಾರಣೆಯಿಂದ ವಾಹನದಲ್ಲಿ ಅಕ್ರಮ ಶೇಂದಿಯನ್ನು ಸಾಗಾಣಿಕೆ ಮಾಡಿರುವುದು ಪತ್ತೆಮಾಡಿ,ಪ್ರಕರಣವನ್ನು ದಾಖಲಿಸಿರುವ ಅಂಶ ನಿಜವಾಗಿ ಸಾಭೀತಾಗಿರುವುದರಿಂದ ಆಟೋರಿಕ್ಷಾ ನೊಂದಣಿ ಸಂ:CTX-8329ವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಕೊಳ್ಳುವುದು ಯೋಗ್ಯವೆಂದು ಕಂಡುಬಂದ ಹಿನ್ನಲೆಯಲ್ಲಿ ಈ ಕೆಳಕಂಡ ಆದೇಶ.

**ಆದೇಶ**

ನೂರ್ ಮಹಮ್ಮದ್ ಹುಸೇನ್, ಅಧಿಕೃತ ಅಧಿಕಾರಿ ಹಾಗೂ ಡೆಪ್ಯುಟಿ ಕಮೀಷನರ್ ಆಫ್ ಎಕ್ಸೈಜ್, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43 ಬಿ ಅಡಿಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಅನುಸರಿಸಿದ ನಂತರ ಕಲಂ 43ಎ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ಉಪ ನಿರೀಕ್ಷಕರು, ಮಂಗಳೂರು ಉಪ ವಿಭಾಗ ಇವರ ಪ್ರ.ಮಾ.ವ ಸಂ: 19/2004–05, ದಿನಾಂಕ:05.04.2005ರಲ್ಲಿ ಅಕ್ರಮವಾಗಿ 280.000 ಲೀಟರು ಶೇಂದಿಯನ್ನು 8 ಕ್ಯಾನುಗಳಲ್ಲಿ ಇರಿಸಿ ಅಟೋ ರಿಕ್ಷಾ ಸಂ: CTX-8329ರಲ್ಲಿ ಸಾಗಾಣಿ ಮಾಡಿರುವುದರಿಂದ , ಬಳಸಿದ ಅಟೋ ರಿಕ್ಷಾ ನೊಂದಣಿ ಸಂ: CTX-8329 (ಚಾಸೀಸ್ ಸಂಖ್ಯೆ: 091339-175-LI ಮತ್ತು ಇಂಜಿನ್ ಸಂಖ್ಯೆ:175-LI 091339) ನ್ನು ಕರ್ನಾಟಕ ಅಬಕಾರಿ ಕಾಯ್ದೆ ಕಲಂ 43ಎ ರನ್ವಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ನೀಡಿರುತ್ತೇನೆ. ಸದ್ರಿ ಮುಟ್ಟುಗೋಲು ಹಾಕಿಕೊಳ್ಳಲಾಗಿರುವ ಆಟೋರಿಕ್ಷಾವನ್ನು ಆರ್.ಸಿ.ಮಾಲಿಕ ಶ್ರೀ ವಲೇರಿಯನ್ ಮಸ್ಕರೇನಸ್, ಬಿನ್ ಇಗ್ನೇಷಿಯಸ್ ಮಸ್ಕರೇನಸ್, ನಿಯರ್ ಕೆನರಾ ರಬ್ಬರ್ ವರ್ಕ್ಸ್, ಶಕ್ತಿನಗರ, ಮಂಗಳೂರು ಇವರ ಸುಪರ್ದಿಗೆ ಮಧ್ಯಂತರ ಬಿಡುಗಡೆಗೊಳಿಸಿ ಆದೇಶಿಸಿ ಹೊರಡಿಸಲಾಗಿರುವ ದಿನಾಂಕ:15.04.2005ರ ಆದೇಶವನ್ನು ರದ್ದುಗೊಳಿಸಿ ಆದೇಶಿಸಿದೆ. ಆರ್.ಸಿ. ಮಾಲಿಕರು ಸದ್ರಿ ಮಧ್ಯಂತರ ಬಿಡುಗಡೆ ನೆಲೆಯಲ್ಲಿ ತನ್ನ ಸುಪರ್ದಿಗೆ ಪಡೆದು ಕೊಂಡಿರುವ ಆಟೋರಿಕ್ಷಾ ಸಂ: CTX-8329 ಇದನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ 30 ದಿನಗಳ ಒಳಗೆ ,ಈ ಪ್ರಾಧಿಕಾರಕ್ಕೆ ಒಪ್ಪಿಸಲು ಆದೇಶಿಸಿದೆ. ತಪ್ಪಿದ್ದಲ್ಲಿ ಆರ್.ಸಿ. ಮಾಲೀಕರು ಈ ಪ್ರಾಧಿಕಾರಕ್ಕೆ ಒಪ್ಪಿಸಿರುವ ಭದ್ರತೆ ಪತ್ರ (B.G) ಸಂಖ್ಯೆ : 250001 ದಿನಾಂಕ:15.04.2005 ಇದನ್ನು ಇನ್ವೋಕ್ ಮಾಡಿ ಭದ್ರತೆ ಮೊತ್ತ ರೂ.3,500/– (ರೂ.ಮೂರು ಸಾವಿರದ ಐನೂರು)ನ್ನು ಸರ್ಕಾರಕ್ಕೆ ಪಡೆಯಲು ಆದೇಶಿಸಿದೆ.

ಈ ಆದೇಶವನ್ನು ದಿನಾಂಕ:29.07.2009ರಂದು ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

ಈ ಆದೇಶವು ಇಂದಿನಿಂದ 30 ದಿವಸಗಳ ನಂತರ ಜ್ಯಾರಿಯಲ್ಲಿ ಬರುತ್ತದೆ.

**ನೂರ್ ಮಹ್ಮಮದ್ ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಅನುಬಂಧ–I**

**ಫಿರ್ಯಾದುದಾರರ ಪರ ಮಂಡಿಸಲಾದ ಸಾಕ್ಷಿಗಳ ವಿವರ:**

ಪ್ರಾ.ಸಾ–I: ಶ್ರೀ ಕೃಷ್ಣ ನಾಯ್ಕ, ಅಬಕಾರಿ ಉಪ ನಿರೀಕ್ಷಕರು, ಸುಳ್ಯ ವಲಯ, ಸುಳ್ಯ.
ಪ್ರಾ.ಸಾ–2 : ಶ್ರೀ ಕೃಷ್ಣಪ್ಪ ಎಂ., ಅಬಕಾರಿ ಉಪ ನಿರೀಕ್ಷಕರು, ಎ.ಜೆ.ಡಿಸ್ಟಿಲರಿ, ಬೈಕಂಪಾಡಿ, ಮಂಗಳೂರು.
ಪ್ರಾ.ಸಾ–3 : ಶ್ರೀ ಪ್ರೇಮಾನಂದ, ಅಬಕಾರಿ ರಕ್ಷಕ, ಅಬಕಾರಿ ಅಧೀಕ್ಷಕರ ಕಛೇರಿ, ಇಐಬಿ, ಉಡುಪಿ ಜಿಲ್ಲೆ.

**ಅನುಬಂಧ–II**

**ಫಿರ್ಯಾದುದಾರರ ಪರ ಮಂಡಿಸಲಾದ ದಾಖಲೆಗಳು:**

ನಿಶಾನೆ ಪಿ–I : ತನಿಖಾ ವರದಿ

ನಿಶಾನೆ ಪಿ–2 : ಪ್ರಥಮ ವರ್ತಮಾನ ವರದಿ
ನಿಶಾನೆ ಪಿ–3 : ಮಹಜರು
ನಿಶಾನೆ ಪಿ–4 : ರಾಸಾಯನಿಕ ವಿಶ್ಲೇಷಣಾ ವರದಿ
ನಿಶಾನೆ ಪಿ–5 : ಸರ್ಚ್ ಲೀಸ್ಟ್
ನಿಶಾನೆ ಪಿ–6 : ಶೋಧನ ವಾರೆಂಟ್
ನಿಶಾನೆ ಪಿ–7 : ಅಬಕಾರಿ ಕಾಯಿದೆ ಕಲಂ 43ಎ ಯಡಿ ವರದಿ

**ಅನುಬಂಧ–III**

**ವಾಹನ ಮಾಲೀಕರ ಪರವಾಗಿ ವಿಚಾರಣೆ ಮಾಡಲಾದ ಸಾಕ್ಷಿದಾರರು:**

**ರಕ್ಷಣಾ ಸಾಕ್ಷಿದಾರರು:** ಶ್ರೀ ವಲೇರಿಯನ್ ಮಸ್ಕರೇನಸ್, ಬಿನ್ ಇಗ್ನೇಷಿಯಸ್ ಮಸ್ಕರೇನಸ್, ಶಕ್ತಿನಗರ, ಪದವು ಮಂಗಳೂರು, ಮಂಗಳೂರು ತಾಲೂಕು.

**ಅರ್ಜಿದಾರರ ಹೇಳಿಕೆ:** – ಯಾವುದು ಇಲ್ಲ –

**ಅನುಬಂಧ–IV**

**ವಾಹನ ಮಾಲೀಕರ ಪರವಾಗಿ ಗುರುತಿಸಲಾದ ದಾಖಲೆಗಳು:** – ಯಾವುದು ಇಲ್ಲ –

**ನೂರ್ ಮಹ್ಮದ್ ಹುಸೇನ್**

ಪಿ.ಆರ್.812

ಅಧಿಕೃತ ಅಧಿಕಾರಿಗಳು ಹಾಗೂ ಡೆಪ್ಯುಟಿ ಕಮೀಷನರ್
ಆಫ್ ಎಕ್ಸೈಜ್, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು.

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬಹುಮಹಡಿ ಕಟ್ಟಡ, ಬೆಂಗಳೂರು–1**

**ಸಂಖ್ಯೆ: ಆಸಾನಿ.271/ಆಡಳಿತ/(2)/2007–08, ದಿನಾಂಕ:24ನೇ ಆಗಸ್ಟ್, 2009**

**ವಿಷಯ:** ಶ್ರೀ ಆರ್.ಬಿ. ಜತನ್, ಸಾಂಖ್ಯಿಕ ನಿರೀಕ್ಷಕರು, ತಾಲ್ಲೂಕು ಕಛೇರಿ, ಹುಬ್ಬಳ್ಳಿ (ಧಾರವಾಡ ಜಿಲ್ಲೆ) ಇವರ ವಿರುದ್ಧ ಶಿಸ್ತಿನ ಕ್ರಮ ಜರುಗಿಸುವ ಕುರಿತು.

**ಉಲ್ಲೇಖ:** 1) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಧಾರವಾಡ ಇವರ ಅರೆ ಸರ್ಕಾರಿ ಪತ್ರದ ಸಂಖ್ಯೆ: ಜಿಸಂಧಾ:4/ಆಡಳಿತ–1/ ವರ್ಗಾವಣೆ–09–10/807, ದಿನಾಂಕ:03.05.2009/05.06.2009 ರೊಂದಿಗೆ ಲಗತ್ತಿಸಲಾದ ತಹಸೀಲ್ದಾರ, ಹುಬ್ಬಳ್ಳಿ ತಾಲ್ಲೂಕು, ಹುಬ್ಬಳ್ಳಿ ಇವರ ಅರೆ ಸರ್ಕಾರಿ ಪತ್ರದ ಸಂಖ್ಯೆ: ಸಿಬ್ಬಂದಿ/ವಹಿ/7/09–10, ದಿನಾಂಕ:28.05.2009.

2) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಆದೇಶದ ದಿನಾಂಕ:11.06.2009.

3) ಅಮಾನತ್ತಿನಲ್ಲಿರುವ ಶ್ರೀ ಆರ್.ಬಿ. ಜತನ್, ಸಾಂಖ್ಯಿಕ ನಿರೀಕ್ಷಕರು, ಇವರ ಮನವಿ ದಿನಾಂಕ:27.07.2009.

4) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಕಾರಣ ಕೇಳುವ ಜ್ಞಾಪನದ ದಿನಾಂಕ:29.07.2009.

**ಪ್ರಸ್ತಾವನೆ:**

ತಹಸೀಲ್ದಾರರು ಹುಬ್ಬಳ್ಳಿ ತಾಲ್ಲೂಕು, ಇವರ ವರದಿಯನ್ನು ಆಧರಿಸಿ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳು, ಧಾರವಾಡ, ಇವರು ಸಲ್ಲಿಸಿದ್ದ ಉಲ್ಲೇಖ (1)ರಲ್ಲಿನ ಪ್ರಸ್ತಾವನೆ ಅನ್ವಯ, ಸಾಂಖ್ಯಿಕ ನಿರೀಕ್ಷಕರ ವೃಂದದ ಸಮೂಹ 'ಸಿ' ಸರ್ಕಾರಿ ನೌಕರರೊಬ್ಬರಿಗೆ ಸಲ್ಲದ ರೀತಿಯ ವರ್ತನೆ ಎಂದು ಪರಿಗಣಿಸಿ, ಅವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ ಶ್ರೀ ಆರ್.ಬಿ. ಜತನ್, ಸಾಂಖ್ಯಿಕ ನಿರೀಕ್ಷಕರು, ತಾಲ್ಲೂಕು ಕಛೇರಿ, ಹುಬ್ಬಳ್ಳಿ, (ಧಾರವಾಡ ಜಿಲ್ಲೆ) ಇವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಏರ್ಪಡಿಸುವುದನ್ನು ಕಾಯ್ದಿರಿಸಿ ಸರ್ಕಾರದ ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು.

ಅಮಾನತ್ತಿನಲ್ಲಿರುವ ಸದರಿ ಸಾಂಖ್ಯಿಕ ನಿರೀಕ್ಷಕರು, ಉಲ್ಲೇಖ (3) ರಲ್ಲಿನ ಅವರ ಮನವಿಯಲ್ಲಿ ಅವರನ್ನು ಕರ್ತವ್ಯಕ್ಕೆ ಮರು ಸ್ಥಾಪಿಸಿದಲ್ಲಿ ನಿಷ್ಠೆಯಿಂದ ಮತ್ತು ದಕ್ಷತೆಯಿಂದ ಕರ್ತವ್ಯ ನಿರ್ವಹಿಸುವುದಾಗಿ ಕೋರಿರುತ್ತಾರೆ. ಸದರಿ ಸಾಂಖ್ಯಿಕ ನಿರೀಕ್ಷಕರ ವಿರುದ್ಧ ಉಲ್ಲೇಖ (4) ರಲ್ಲಿನ ಕಾರಣ ಕೇಳುವ ಜ್ಞಾಪನದೊಂದಿಗೆ ಆರೋಪ ಪಟ್ಟಿ ನೀಡಲಾಗಿದ್ದು, ಅವರ ಲಿಖಿತ ಹೇಳಿಕೆಯನ್ನು ಪರಿಶೀಲಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸುವುದರ ಕುರಿತು ಪರಿಶೀಲಿಸುವುದನ್ನು ಕಾಯ್ದಿರಿಸಿ, ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಕಛೇರಿ ಆದೇಶ ಸಂಖ್ಯೆ: ಆಡಳಿತ/274/2009–10**

ಶ್ರೀ ಆರ್.ಬಿ. ಜತನ್ ಅಮಾನತ್ತಿನಲ್ಲಿರುವ ಸಾಂಖ್ಯಿಕ ನಿರೀಕ್ಷಕರು, ಇವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆ ಕಾಯ್ದಿರಿಸಿ, ಸರ್ಕಾರದ ಸೇವೆಗೆ ಪುನರ್ ಸ್ಥಾಪಿಸಿ, ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳು, ಧಾರವಾಡ, ಈ ಕಛೇರಿಯಲ್ಲಿ ಖಾಲಿ ಇರುವ ಸಾಂಖ್ಯಿಕ ನಿರೀಕ್ಷಕರ ಹುದ್ದೆಗೆ, ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕಾತಿ ಮಾಡಲಾಗಿದೆ.

**ಹೆಚ್.ಇ. ರಾಜಶೇಖರಪ್ಪ**

ಪಿ.ಆರ್.836

ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರ.

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬಹುಮಹಡಿ ಕಟ್ಟಡ, ಬೆಂಗಳೂರು–1**

**ಸಂಖ್ಯೆ: ಆಸಾಂನಿ.175/ಆಡಳಿತ–2/2007–08, ದಿನಾಂಕ:26ನೇ ಆಗಸ್ಟ್, 2009**

**ವಿಷಯ:** ತಾಲ್ಲೂಕು ಕಚೇರಿ, ಹಾನಗಲ್ (ಹಾವೇರಿ ಜಿಲ್ಲೆ) ನಂತರ ಸೇವೆಯಿಂದ ಅಮಾನತ್ತುಗೊಂಡು ಸೇವೆಯಲ್ಲಿ ಪುನರ್‌ಸ್ಥಾಪಿತಗೊಂಡ ನಂತರ ತಾಲ್ಲೂಕು ಕಚೇರಿ, ನವಲಗುಂದ (ಧಾರವಾಡ ಜಿಲ್ಲೆ) ಇಲ್ಲಿ ನೇಮಕಾತಿಗೊಂಡ ನಂತರ ದೂರಿನ ಮೇಲೆ ತಾಲ್ಲೂಕು ಕಚೇರಿ, ಬೆಳ್ತಂಗಡಿ (ಮಂಗಳೂರು ಜಿಲ್ಲೆ) ಇಲ್ಲಿಗೆ ವರ್ಗಾವಣೆ ಹೊಂದಿದ ನಂತರ ಜಿಲ್ಲಾಧಿಕಾರಿಗಳು, ಹಾವೇರಿ ಇವರ ಕುರಿತು ಹಾಗೂ ಹಿಂದಿನ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಹಾಗೂ ನಿರ್ದೇಶನಾಲಯದ ಅಧಿಕಾರಿಗಳ ಕುರಿತು ನಿಂದನಾರ್ಹವಾಗಿ ಸರ್ಕಾರಿ ನೌಕರನೊಬ್ಬನಿಗೆ ಸಲ್ಲದ ರೀತಿಯಲ್ಲಿ ಮಾಡಿದ ಟೀಕೆಗಾಗಿ / ಆರೋಪಗಳಿಗಾಗಿ ಮತ್ತೆ ಸರ್ಕಾರದ ಸೇವೆಯಿಂದ ಅಮಾನತ್ತುಗೊಂಡು ಸೇವೆಯಲ್ಲಿ ಪುನರ್ ಸ್ಥಾಪನೆಗೊಂಡು ಪ್ರಸ್ತುತ ತಾಲ್ಲೂಕು ಕಚೇರಿ, ಸಿಂಧನೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ **ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು** ಇವರ ವಿರುದ್ಧ ಕೈಗೊಂಡ ಇಲಾಖಾ ವಿಚಾರಣೆ ಪ್ರಕರಣದಲ್ಲಿ ಅಂತಿಮ ದಂಡನೆ ವಿಧಿಸುವ ಕುರಿತು.

**ಉಲ್ಲೇಖ:**

1) ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ದಿನಾಂಕ:18.11.2006 ರಂದು ನೇರವಾಗಿ ಗೌರವಾನ್ವಿತ ರಾಜ್ಯ ಮಾಹಿತಿ ಆಯೋಗಕ್ಕೆ ಸಲ್ಲಿಸಲಾಗಿದ್ದ ಮೇಲ್ಮನವಿಗೆ ಸಂಬಂಧಿಸಿದಂತೆ ರಾಜ್ಯ ಪ್ರಧಾನ ಮಾಹಿತಿ ಆಯುಕ್ತರು ದಿನಾಂಕ:07.02.2007 ರಂದು ನೀಡಿದ ಆದೇಶ.
2) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಆದೇಶದ ದಿನಾಂಕ:05.04.2007.
3) ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ದಾವಣಗೆರೆ ಇವರು ದಿನಾಂಕ:12.5.2007 ರಂದು ಸಲ್ಲಿಸಿದ ಪೂರ್ವಭಾವಿ ವಿಚಾರಣಾ ವರದಿ.
4) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ: 11 ರ ಅಡಿಯಲ್ಲಿ ಸದರಿ ಆಪಾದಿತ ಸರ್ಕಾರಿ ನೌಕರನಾದ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ಇವರಿಗೆ ಹೊರಡಿಸಲಾದ **"ಕಾರಣ ಕೇಳುವ ಜ್ಞಾಪನ"**.
5) ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ದಿನಾಂಕ:12.02.2008 ರಂದು ಸಲ್ಲಿಸಿದ ಲಿಖಿತ ಹೇಳಿಕೆ.
6) ಈ ನಿರ್ದೇಶನಾಲಯದ ಇದೇ ಕ್ರಮಾಂಕದ ಆದೇಶದ ದಿನಾಂಕ: 20.08.2008.
7) ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ಅವರ ರಕ್ಷಣಾ ಸಹಾಯಕರಾಗಿದ್ದ ಶ್ರೀ ಚಲವಾದಿ ಇವರ ಮೂಲಕ ದಿನಾಂಕ:13.10.2008 ರಂದು ಸಲ್ಲಿಸಿದ ಮನವಿ.
8) ಈ ನಿರ್ದೇಶನಾಲಯದ ಆದೇಶದ ಸಂಖ್ಯೆ: ಆಡಳಿತ/390/2008–09, ದಿನಾಂಕ:17.10.2008.
9) ಶ್ರೀ ಫ.ಸಿ. ಗುಡ್ಡಾಕಾರ, ಬಿ.ಎ., ಎಲ್.ಎಲ್.ಬಿ (ವಿಶೇಷ), ನಿವೃತ್ತ ಜಿಲ್ಲಾ ನ್ಯಾಯಾಧೀಶರು ಮತ್ತು ವಿಚಾರಣಾಧಿಕಾರಿಗಳು, ಧಾರವಾಡ ಇವರು ದಿನಾಂಕ:03.11.2008 ರಂದು ಸಲ್ಲಿಸಿದ **"ಇಲಾಖಾ ವಿಚಾರಣಾ ವರದಿ"**.
10) ಉಲ್ಲೇಖ (9) ರಲ್ಲಿನ ಇಲಾಖಾ ವಿಚಾರಣಾ ವರದಿಯೊಂದಿಗೆ ಆಪಾದಿತ ಸರ್ಕಾರಿ ನೌಕರನಾದ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ಇವರಿಗೆ ನೀಡಲಾದ ನಿರ್ದೇಶನಾಲಯದ ಇದೇ ಕ್ರಮಾಂಕದ ಜ್ಞಾಪನದ ದಿನಾಂಕ:06.01.2009 (2ನೇ ಕಾರಣ ಕೇಳುವ ಜ್ಞಾಪನ)
11) ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ಹಾಗೂ ಆಪಾದಿತ ಸರ್ಕಾರಿ ನೌಕರರು ಸಲ್ಲಿಸಿದ ವಿವರಣೆ ದಿನಾಂಕ:27.01.2009.

**ಪ್ರಸ್ತಾವನೆ:**

(1) **ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು, ಪ್ರಸ್ತುತ ತಾಲ್ಲೂಕು ಕಚೇರಿ, ಸಿಂಧನೂರು, (ರಾಯಚೂರು ಜಿಲ್ಲೆ) ಇಲ್ಲಿ ಅಮಾನತ್ತಿನಿಂದ ಸೇವೆಗೆ ಪುನರ್‌ಸ್ಥಾಪನೆಗೊಂಡು ಸೇವೆ ಸಲ್ಲಿಸುತ್ತಿರುವ ಇವರು** ತಾಲ್ಲೂಕು ಕಚೇರಿ, ಹಾನಗಲ್ (ಹಾವೇರಿ ಜಿಲ್ಲೆ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಸರ್ಕಾರದ ಹಣದ ದುರುಪಯೋಗ, ಕರ್ತವ್ಯಲೋಪ ಇತ್ಯಾದಿ ಆಪಾದನೆಗಳಿಗೆ ಸಂಬಂಧಿಸಿದಂತೆ, ಜಿಲ್ಲಾಧಿಕಾರಿಗಳು, ಹಾವೇರಿ ಇವರ ಆದೇಶದ ಅನ್ವಯ ಅಮಾನತ್ತುಗೊಂಡಿದ್ದ ಅವಧಿಯಲ್ಲಿ **"ದಿನಾಂಕ 3.10.2006 ರಂದು ಹಾವೇರಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಗೆ ಮಾಹಿತಿ ಹಕ್ಕು ಅಧಿನಿಯಮಗಳ ಅಡಿಯಲ್ಲಿ ಅರ್ಜಿ ಸಲ್ಲಿಸಲು ಭೇಟಿ ನೀಡಿ, ಮಾಹಿತಿ ಕೋರಿದ ಅರ್ಜಿಯನ್ನು ಸಲ್ಲಿಸದೇ ಅರ್ಜಿಯ ಮೇಲೆ ಕಚೇರಿಯ ಮೊಹರನ್ನು ಅನಧಿಕೃತವಾಗಿ ದಾಖಲಿಸಿಕೊಂಡು"** ನಂತರ, ದಿನಾಂಕ 18.11.2006 ರಂದು ನೇರವಾಗಿ ಗೌರವಾನ್ವಿತ ರಾಜ್ಯ ಮಾಹಿತಿ ಆಯೋಗಕ್ಕೆ ಸಲ್ಲಿಸಲಾದ **ಸದರಿ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರ** ಮೇಲ್ಮನವಿ ಮತ್ತು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಹಾವೇರಿ ಇವರು ಕರ್ನಾಟಕ ಮಾಹಿತಿ ಆಯೋಗಕ್ಕೆ ನೇರವಾಗಿ ಸಲ್ಲಿಸಲಾದ ಪತ್ರದ ಸಂಖ್ಯೆ: ಜಿಸಂಹಾ/ಆಡಳಿತ/ಮಾಹ/06–07, ದಿನಾಂಕ 27.1.2007 ಇವುಗಳನ್ನು ಪರಿಶೀಲಿಸಿ, ದಿನಾಂಕ 7.2.2007 ರಂದು ವಿಚಾರಣೆ ಏರ್ಪಡಿಸಿ ನೀಡಲಾದ ಆದೇಶದಲ್ಲಿ ಇನ್ನಿತರ ಆದೇಶದೊಂದಿಗೆ "**Directorate of Economics and**

**Statistics is also directed to inquire into the misplacing of the complainant's application filed under the Right to Information Act and to take action on proposal for disciplinary proceedings sent by the District Statistical Officer**" ಎಂದು ಗೌರವಾನ್ವಿತ ರಾಜ್ಯ ಮಾಹಿತಿ ಆಯೋಗವು ಆದೇಶಿಸಿತ್ತು.

(2) ಮೇಲಿನ ಕಂಡಿಕೆಯಲ್ಲಿ ವಿವರಿಸಿದಂತೆ, ರಾಜ್ಯ ಮಾಹಿತಿ ಆಯೋಗದ ಆದೇಶದ ಅನ್ವಯ ಸದರಿ ಆರೋಪಿತ ನೌಕರನಾದ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ದಿನಾಂಕ:03.10.2006 ರಂದು ಹಾವೇರಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಗೆ ಸಲ್ಲಿಸಲಾಗಿತ್ತೆನ್ನಲಾದ ಅರ್ಜಿಯು ಕಳೆದು ಹೋಗಿರುವುದರ (about misplacing of complainant's application) ಕುರಿತು, ಪೂರ್ವಭಾವಿ ವಿಚಾರಣೆ ಕೈಗೊಂಡು ವರದಿ ಸಲ್ಲಿಸುವಂತೆ ಉಲ್ಲೇಖ (2) ರಲ್ಲಿನ ಆದೇಶದ ದಿನಾಂಕ:05.04.2007 ರಲ್ಲಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ದಾವಣಗೆರೆ ಇವರಿಗೆ ಸೂಚಿಸಲಾಗಿತ್ತು.

(3) ಮೇಲಿನ 2ನೇ ಕಂಡಿಕೆಯಲ್ಲಿ ತಿಳಿಸಲಾದ ಹಾಗೂ ಉಲ್ಲೇಖ (2) ರಲ್ಲಿನ ಆದೇಶದ ಅನ್ವಯ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ದಾವಣಗೆರೆ ಇವರು ಉಲ್ಲೇಖ (3) ರಲ್ಲಿನ ದಿನಾಂಕ:12.05.2007 ರಂದು ಸಲ್ಲಿಸಿದ್ದ ಪೂರ್ವಭಾವಿ ವಿಚಾರಣಾ ವರದಿಯಲ್ಲಿ **"ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ದಿನಾಂಕ:03.10.2006 ರಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಹಾವೇರಿ ಇವರಿಗೆ ಮಾಹಿತಿ ಹಕ್ಕು ಅಧಿನಿಯಮದಡಿ 'ಸಲ್ಲಿಸಲಾಗಿದೆ' ಎಂಬ ಅರ್ಜಿಗೆ ಕಚೇರಿಯ ಸೀಲನ್ನು ಅನಧಿಕೃತವಾಗಿ ಬಳಸಿಕೊಂಡಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ"** ಎಂದು ಅಭಿಪ್ರಾಯ ನೀಡಿದ್ದರಿಂದ, ಆರೋಪಿತ ಸರ್ಕಾರಿ ನೌಕರರಾದ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ಇವರ ವಿರುದ್ಧದ ಆರೋಪದ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಸದರಿ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ಇವರಿಗೆ ಉಲ್ಲೇಖ (4) ರಲ್ಲಿನ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957 ರ ನಿಯಮ: 11 ರ ಅನ್ವಯ ಹೊರಡಿಸಲಾದ ಕಾರಣ ಕೇಳುವ ಜ್ಞಾಪನದೊಂದಿಗೆ ಅವರ ವಿರುದ್ಧದ ದೋಷಾರೋಪಣಾ ಪಟ್ಟಿಯನ್ನು ಸಾಬೀತುಪಡಿಸುವ ವಿವರಣಾ ಪಟ್ಟಿಯನ್ನು ಅನುಬಂಧ–2 ರಲ್ಲಿ ಹಾಗೂ ದೋಷಾರೋಪಣಾ ಪಟ್ಟಿಯು ಯಾವ ದಸ್ತಾವೇಜು ಹಾಗೂ ಸಾಕ್ಷಿಗಳಿಂದ ಆಧರಿಸಲ್ಪಟ್ಟಿದೆಯೋ ಆ ಪಟ್ಟಿಗಳನ್ನು ಅನುಬಂಧ–3 ಮತ್ತು ಅನುಬಂಧ–4 ರಲ್ಲಿ ಒದಗಿಸಿ, ಅವರ ವಿವರಣೆಯನ್ನು 15 ದಿನಗಳ ಒಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿತ್ತು.

**(4) ಸದರಿ ಆರೋಪಿತ ಸರ್ಕಾರಿ ನೌಕರನ ವಿರುದ್ಧ ಮೇಲೆ ತಿಳಿಸಲಾದ ಕಾರಣ ಕೇಳುವ ಜ್ಞಾಪನದ ಅನುಬಂಧ–1 ರಲ್ಲಿ ದೋಷಾರೋಪಣಾ ಪಟ್ಟಿಯನ್ನು ಈ ಕೆಳಗೆ ಪುನರುಚ್ಛರಿಸಲಾಗಿದೆ:**

"ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು, ಪ್ರಸ್ತುತ ಬೆಳ್ತಂಗಡಿ ತಹಶೀಲ್ದಾರರ ಕಚೇರಿ ಆದ ನೀವು ಹಾವೇರಿ ಜಿಲ್ಲೆ, ಹಾನಗಲ್ ತಹಶೀಲ್ದಾರರ ಕಚೇರಿಯಿಂದ ಅಮಾನತ್ತಿನಲ್ಲಿದ್ದಾಗ ದಿನಾಂಕ:03.10.2006 ರಂದು ಹಾವೇರಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಗೆ ಮಾಹಿತಿ ಹಕ್ಕು ಅಧಿನಿಯಮದಡಿ ಅರ್ಜಿ ಸಲ್ಲಿಸಲು ಭೇಟಿ ನೀಡಿ, ಮಾಹಿತಿ ಕೋರಿದ ಅರ್ಜಿಯನ್ನು ಸಲ್ಲಿಸದೇ ಅರ್ಜಿಯ ಮೇಲೆ ಕಚೇರಿಯ ಮೊಹರನ್ನು ಅನಧಿಕೃತವಾಗಿ ದಾಖಲಿಸಿಕೊಂಡಿದ್ದೀರಿ. ನಂತರ, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಹಾವೇರಿ ಇವರು ನಿಮಗೆ ಮಾಹಿತಿ ನೀಡಿಲ್ಲವೆಂದು, ದಿನಾಂಕ:18.11.2006 ರಂದು ನೇರವಾಗಿ ರಾಜ್ಯ ಮಾಹಿತಿ ಆಯೋಗಕ್ಕೆ ಸಲ್ಲಿಸಲಾದ ನಿಮ್ಮ ದೂರು ಮತ್ತು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಹಾವೇರಿ ಇವರು ಕರ್ನಾಟಕ ಮಾಹಿತಿ ಆಯೋಗಕ್ಕೆ ನೇರವಾಗಿ ಸಲ್ಲಿಸಲಾದ ಪತ್ರದ ಸಂಖ್ಯೆ: ಜಿಸಂಹಾ/ಆಡಳಿತ/ಮಾಹ/06–07, ದಿನಾಂಕ:27.01.2007 ಇದನ್ನು ಪರಿಶೀಲಿಸಿ, ದಿನಾಂಕ 7.2.2007 ರಂದು ಮಾಹಿತಿ ಆಯೋಗದಲ್ಲಿ ವಿಚಾರಣೆ ನಿಗದಿಪಡಿಸಲಾಗಿತ್ತು.

ರಾಜ್ಯ ಪ್ರಧಾನ ಮಾಹಿತಿ ಆಯುಕ್ತರು ದಿನಾಂಕ:07.02.2007 ರಂದು ವಿಚಾರಣೆ ಏರ್ಪಡಿಸಿ ಇನ್ನಿತರ ಆದೇಶದೊಂದಿಗೆ "Directorate of Economics and Statistics is also directed to inquire into the misplacing of the complainant's application filed under the Right to Information Act and to take action on proposal for disciplinary proceedings sent by the District Statistical Officer" ಎಂದು ಆದೇಶಿಸಿದ್ದರಿಂದ, ಹಾಗೂ ಇದೇ ವಿಷಯಕ್ಕೆ ಸಂಬಂಧಪಟ್ಟಂತೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರು ಪೂರ್ವಭಾವಿ ವಿಚಾರಣೆ ನಡೆಸಿ, ದಿನಾಂಕ:12.05.2007 ರಂದು ಸಲ್ಲಿಸಿದ ವರದಿಯಲ್ಲಿ **"**ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ದಿನಾಂಕ 3.10.2006 ರಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಹಾವೇರಿ ಇವರಿಗೆ ಮಾಹಿತಿ ಹಕ್ಕು ಅಧಿನಿಯಮದಡಿ ಸಲ್ಲಿಸಲಾಗಿದೆ ಎಂಬ ಅರ್ಜಿಗೆ ಕಚೇರಿಯ ಸೀಲನ್ನು ಅನಧಿಕೃತವಾಗಿ ಬಳಸಿಕೊಂಡಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ**"** ಎಂಬ ಅಭಿಪ್ರಾಯ ನೀಡಿದ್ದರಿಂದ, ನಿಮ್ಮ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಲು ಉದ್ದೇಶಿಸಿದೆ."

(5) ಸದರಿ ಆರೋಪಿತ ಸರ್ಕಾರಿ ನೌಕರನಾದ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ಮೇಲಿನ ಕಂಡಿಕೆ (3) ಮತ್ತು (4) ರಲ್ಲಿ ತಿಳಿಸಲಾದ ಅವರ ವಿರುದ್ಧದ ಆರೋಪಗಳಿಗೆ ಸಂಬಂಧಿಸಿದಂತೆ, ಉಲ್ಲೇಖ (5) ರಲ್ಲಿನ ಅವರ ಲಿಖಿತ ಹೇಳಿಕೆ ದಿನಾಂಕ 12.2.2008 ರಲ್ಲಿ ಅವರ ಮೇಲಿನ ಆಪಾದನೆಗಳನ್ನು ಒಪ್ಪದೆ ಇರುವ ಅಥವಾ ಒಪ್ಪಿಕೊಂಡಿರುವ ಕುರಿತು, ಹಾಗೂ ಒಪ್ಪದೆ ಇದ್ದಲ್ಲಿ ಅದಕ್ಕೆ ಸಂಬಂಧಿಸಿದಂತೆ ಅವರನ್ನು ರಕ್ಷಿಸಿಕೊಳ್ಳಬೇಕಾದ ಅಥವಾ ಸಮರ್ಥಿಸಿಕೊಳ್ಳಬಹುದಾದ ಲಿಖಿತ ಹೇಳಿಕೆಯನ್ನು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸುವುದರ ಬದಲಾಗಿ **"ಮಾಹಿತಿ ಹಕ್ಕು ಅಧಿನಿಯಮ 2005 ಜಾರಿ ಆಗಿರುವುದು ಕೆಲವು ಅಧಿಕಾರಿಗಳಿಗೆ ನುಂಗಲಾಗದ ಬಿಸಿ ತುಪ್ಪದಂತಾಗಿದ್ದು, ಕೆಲವು ಅಧಿಕಾರಿ ವರ್ಗದಲ್ಲಿ ನಿರ್ದೇಶನಾಲಯದ ಅಧಿಕಾರಿಗಳು ಇರುವುದು ತುಂಬಾ ವಿಷಾಧನೀಯ" ವೆಂದೂ,** ನಂತರ ಅದೇ ಲಿಖಿತ ಹೇಳಿಕೆಯಲ್ಲಿ ಅವರ ವಿರುದ್ಧದ ಪೂರ್ವಭಾವಿ ವಿಚಾರಣೆಯಲ್ಲಿನ ಅಂಶಗಳನ್ನು ಟೀಕಿಸಿ "ಮೊಹರುಗಳ ದುರ್ಬಳಕೆ" ಎಂದು ತಿಳಿಸಿದ್ದು ಒಬ್ಬ ಕಚೇರಿಯ ಮುಖ್ಯಸ್ಥರು ಈ ಅಭಿಪ್ರಾಯಕ್ಕೆ ಬರುವುದು ಅವರ ಹುದ್ದೆಗೆ ಶೋಭೆ ತರುವಂತಹದಲ್ಲ. ಏಕೆಂದರೆ, ದಾವಣಗೆರೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳೆಂದು ಕಾರ್ಯ ನಿರ್ವಹಿಸುತ್ತಿರುವ ಅವರ ಕಚೇರಿಯ ಮೊಹರುಗಳು ಬೇಕಾಬಿಟ್ಟಿಯಾಗಿ ಇಡಲು ಸಾಧ್ಯವೆ? ಅಥವಾ ತಮ್ಮ ತನಿಖೆ ವೇಳೆಯಲ್ಲಿ ಗಮನಿಸಿದರೆ? ಅಥವಾ ವಾಸ್ತವವಾಗಿ ಮೊಹರುಗಳು ಬೇಕಾಬಿಟ್ಟಿಯಾಗಿ ಬಿದ್ದಿವೆಯೆ? ಎಂಬುದನ್ನು ತಮ್ಮ ಆತ್ಮಾವಲೋಕನ ಮಾಡಿಕೊಳ್ಳಬೇಕೆಂದು ಹಾಗೂ ತನಿಖೆಗೆ ಬಂದ ಅಧಿಕಾರಿಗಳು ಒಬ್ಬ ಅಧಿಕಾರಿಯನ್ನು ರಕ್ಷಿಸುವ ಉದ್ದೇಶದಿಂದ ತಪ್ಪು ಅಭಿಪ್ರಾಯಕ್ಕೆ ಬಂದದ್ದು ಕಂಡುಬರುತ್ತದೆ ಎಂದು ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ಪೂರ್ವಭಾವಿ ವಿಚಾರಣೆ ನಡೆಸಿದ ಅಧಿಕಾರಿಗಳ ವಿರುದ್ಧ ಅವರ ಲಿಖಿತ ಹೇಳಿಕೆಯಲ್ಲಿ ಆಪಾದನೆಗಳನ್ನು ಮಾಡಿದ್ದಾರೆಯೇ ಹೊರತು ಆತನ ಮೇಲಿನ ಆಪಾದನೆಗಳಿಗೆ / ಆರೋಪಗಳಿಗೆ ಸಂಬಂಧಿಸಿದಂತೆ ಯಾವುದೇ ಸಮಜಾಯಿಷಿ ಅಥವಾ ದಾಖಲಾತಿಗಳು ಅವರ ಲಿಖಿತ ಹೇಳಿಕೆಯಲ್ಲಿ ಇಲ್ಲದಿರುವುದರಿಂದ, ಹಾಗೂ ಅದನ್ನೆ ಇನ್ನಷ್ಟು ಸ್ಪಷ್ಟಪಡಿಸಬಹುದಾದಲ್ಲಿ ಸದರಿ ಆರೋಪಿತ ಸರ್ಕಾರಿ ನೌಕರನು ಆತನನ್ನು ರಕ್ಷಿಸಿಕೊಳ್ಳಬಹುದಾದ ಸಮಜಾಯಿಷಿ ಅಥವಾ ಅವರ ವಿರುದ್ಧದ ದೋಷಾರೋಪಣೆಯನ್ನು ಸಮರ್ಥಿಸಿಕೊಳ್ಳಬಹುದಾದ ದಾಖಲಾತಿಗಳನ್ನು ಒದಗಿಸುವುದರ ಬದಲಾಗಿ ಅವರ ಲಿಖಿತ ಹೇಳಿಕೆಯಲ್ಲಿ ಈ ನಿರ್ದೇಶನಾಲಯದ ಅಧಿಕಾರಿಗಳನ್ನು ಅವರ ಮೇಲೆ ಆಪಾದನೆ ಮಾಡಿದ ಸಮೂಹ 'ಎ' ಅಧಿಕಾರಗಳಾದ ಹಾವೇರಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಹಾಗೂ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಪೂರ್ವಭಾವಿ ವಿಚಾರಣೆ ಕೈಗೊಂಡ ಸಮೂಹ 'ಎ' ಅಧಿಕಾರಿಗಳಾದ ದಾವಣಗೆರೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ವಿರುದ್ಧ ಆಪಾದನೆ ಮಾಡಿ ಗಂಭೀರ ದುರ್ನಡತೆ ಎಸಗಿದ್ದರಿಂದಲೂ, ಹಾಗೂ ಸದರಿ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ಇವರ ವಿರುದ್ಧದ ದೋಷಾರೋಪಣೆಗೆ ಸಂಬಂಧಿಸಿದಂತೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ಸದರಿ ಆಪಾದಿತ ಸರ್ಕಾರಿ ನೌಕರರಾದ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ಇವರ ವಿರುದ್ಧ ಇಲಾಖಾ ವಿಚಾರಣೆ ಏರ್ಪಡಿಸಲು ನಿರ್ಧರಿಸಲಾಯಿತು.

(6) ಸದರಿ ಆಪಾದಿತ ಸರ್ಕಾರಿ ನೌಕರನು ಆತನ ಲಿಖಿತ ಹೇಳಿಕೆಯಲ್ಲಿ ಆತನ ವಿರುದ್ಧದ ಆಪಾದನೆಗಳ ಕುರಿತು ಪೂರ್ವಭಾವಿ ವಿಚಾರಣೆ ಕೈಗೊಂಡ ಇಲಾಖೆಯ ಸಮೂಹ 'ಎ' ಅಧಿಕಾರಿಗಳಾದ ದಾವಣಗೆರೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ವಿರುದ್ಧ ತೀವ್ರವಾದ ಆಪಾದನೆ ಮಾಡಿದ್ದರಿಂದ ಇಲಾಖಾ ಅಧಿಕಾರಿಯನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕಾತಿ ಮಾಡುವುದರ ಬದಲಾಗಿ ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ/3/ಸೇಇವಿ/96, ದಿನಾಂಕ:24.04.1998 ರ ಅನ್ವಯ ಶ್ರೀ ಫ.ಸಿ. ಗುಡ್ಡಾಕಾರ, ನಿವೃತ್ತ ಜಿಲ್ಲಾ ಹಾಗೂ ಸೆಶನ್ಸ್ ನ್ಯಾಯಾಧೀಶರು, ಧಾರವಾಡ ಇವರನ್ನು ಉಲ್ಲೇಖ (6) ರಲ್ಲಿನ ಈ ನಿರ್ದೇಶನಾಲಯದ ಆದೇಶದಲ್ಲಿ ಸದರಿ ಆರೋಪಿತ ಸರ್ಕಾರಿ ನೌಕರರಾದ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರ ವಿರುದ್ಧ ಹೊಂದಿಸಲಾದ ದೋಷಾರೋಪಣೆಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಗಾಗಿ ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿತ್ತು.

(7) ಈ ನಡುವೆ ಮೇಲಿನ ಕಂಡಿಕೆ: 6 ರಲ್ಲಿ ವಿವರಿಸಿದಂತೆ, ಸದರಿ ಆರೋಪಿತ ಸರ್ಕಾರಿ ನೌಕರನ ವಿರುದ್ಧದ ದೋಷಾರೋಪಣೆಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಗೆ ನಿವೃತ್ತ ಜಿಲ್ಲಾ ಹಾಗೂ ಸೆಶನ್ಸ್ ನ್ಯಾಯಾಧೀಶರನ್ನು ನೇಮಕಾತಿ ಮಾಡಿದ್ದನ್ನು ತೀವ್ರವಾಗಿ ವಿರೋಧಿಸಿ ಹಾಗೂ ಸದರಿ ಆರೋಪಿತ ಸರ್ಕಾರಿ ನೌಕರನು ನಿವೃತ್ತ ಜಿಲ್ಲಾ ಹಾಗೂ ಸೆಶನ್ಸ್ ನ್ಯಾಯಾಧೀಶರರು ಅವರಿಗೆ ಅನುಕೂಲವಾದ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಧಾರವಾಡ ಇಲ್ಲಿ ವಿಚಾರಣೆ ಏರ್ಪಡಿಸಿದ್ದನ್ನು ತೀವ್ರವಾಗಿ ವಿರೋಧಿಸಿ ಸಲ್ಲಿಸಿದ್ದ ಉಲ್ಲೇಖ (7) ರಲ್ಲಿನ ಅವರ ಅರ್ಜಿಯ ದಿನಾಂಕ:13.10.2008 ನ್ನು ಪರಿಶೀಲಿಸಿ, "ಆಪಾದಿತ ಸರ್ಕಾರಿ ನೌಕರನು ನಿವೃತ್ತ ಜಿಲ್ಲಾ ಹಾಗೂ ಸೆಶನ್ಸ್ ನ್ಯಾಯಾಧೀಶರ ವಿರುದ್ಧ ಅವರು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಪ್ರಭಾವಕ್ಕೆ ಒಳಗಾಗುತ್ತಾರೆಂಬ ಆಪಾದನೆಗಳನ್ನು ಪರಿಶೀಲಿಸಿ ಗೌರವಾನ್ವಿತ ನಿವೃತ್ತ ಜಿಲ್ಲಾ ಹಾಗೂ ಸೆಶನ್ಸ್ ನ್ಯಾಯಾಧೀಶರಾದ ವಿಚಾರಣಾ

ಅಧಿಕಾರಿಗಳನ್ನು ಹಾಗೂ ವಿಚಾರಣೆ ಸ್ಥಳವನ್ನು ಬದಲಾಯಿಸಲು ಅವಕಾಶವಿಲ್ಲವೆಂದೂ, ಹಾಗೂ ಸದರಿ ಆಪಾದಿತ ಸರ್ಕಾರಿ ನೌಕರನು ಕಚೇರಿ ಮುಖ್ಯಸ್ಥರ ಹಾಗೂ ಇಲಾಖೆಯ ಹಿರಿಯ ಅಧಿಕಾರಿಗಳ ವಿರುದ್ಧ ನಿರಂತರವಾಗಿ ಆಪಾದನೆಗಳನ್ನು ಮಾಡುತ್ತಿರುವ ಪ್ರವೃತ್ತಿ ಹೊಂದಿದ್ದನ್ನು ಪರಿಗಣಿಸಿ, ಹಾಗೂ ಇದೇ ಆರೋಪಿತ ಸಿಬ್ಬಂದಿಯು ಹಾವೇರಿ ಜಿಲ್ಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕಚೇರಿ ಮುಖ್ಯಸ್ಥರ ವಿರುದ್ಧ ಸರ್ಕಾರಕ್ಕೆ ಸಲ್ಲಿಸಿದ ದೂರೊಂದಕ್ಕೆ ಸಂಬಂಧಿಸಿದಂತೆ ಸರ್ಕಾರದ ಸೂಚನೆ ಅನ್ವಯ ಜಿಲ್ಲಾಧಿಕಾರಿಗಳು, ಹಾವೇರಿ ಇವರು ಆಪಾದಿತ ಸರ್ಕಾರಿ ನೌಕರನ ವಿರುದ್ಧ ಸಲ್ಲಿಸಿದ್ದ ಪೂರ್ವಭಾವಿ ವಿಚಾರಣೆಗೆ ಸಂಬಂಧಿಸಿದಂತೆ ಸದರಿ ಆಪಾದಿತ ಸರ್ಕಾರಿ ನೌಕರನು ಆ ವಿಚಾರಣೆ ಪ್ರಕರಣದಲ್ಲಿ ಕೂಡ ಹಾವೇರಿ ಜಿಲ್ಲಾಧಿಕಾರಿಗಳ ವಿರುದ್ಧ ಪ್ರಭಾವಕ್ಕೆ ಒಳಗಾಗಿರುವ ಆಪಾದನೆ ಮಾಡಿದ್ದರಿಂದ, ಒಟ್ಟಾರೆ, ಸದರಿ ಆಪಾದಿತ ಸರ್ಕಾರಿ ನೌಕರನು ಸಮೂಹ **"ಸಿ"** ವೃಂದದ ಸಾಂಖ್ಯಿಕ ನಿರೀಕ್ಷಕರ ಹುದ್ದೆಯಲ್ಲಿದ್ದು, ಆತನಿಗೆ ವಹಿಸಲಾದ ಸರ್ಕಾರದ ಕರ್ತವ್ಯಗಳನ್ನು ತೃಪ್ತಿಕರವಾಗಿ ನಿರ್ವಹಿಸದೆ ಹಿರಿಯ ಅಧಿಕಾರಿಗಳ ವಿರುದ್ಧ ಆಪಾದನೆಗಳನ್ನು ಮಾಡುವ ಪ್ರವೃತ್ತಿಯನ್ನು ಮುಂದುವರೆಸಿದ್ದು ಪ್ರಸ್ತುತ ಇಲಾಖಾ ವಿಚಾರಣೆಗೆ ಸಂಬಂಧಿಸಿದಂತೆ ನಿವೃತ್ತ ಜಿಲ್ಲಾ ಹಾಗೂ ಸೆಶೆನ್ಸ್ ನ್ಯಾಯಾಧೀಶರ ಮೇಲೆ ಅವರೂ ಪ್ರಭಾವಕ್ಕೆ ಒಳಗಾಗುತ್ತಾರೆಂಬ ಆಪಾದನೆಯನ್ನು ಪರಿಗಣಿಸುವುದು ಸೂಕ್ತವಲ್ಲವೆಂದು ಪರಿಗಣಿಸಿ, ಹಾಗೂ ಇಲಾಖಾ ವಿಚಾರಣೆಯ ದಾರಿಯನ್ನು ತಪ್ಪಿಸುವ ದುರುದ್ದೇಶದಿಂದ ಇಂತಹ ಅರ್ಜಿಯನ್ನು ಸಲ್ಲಿಸಿರುವುದು ಸ್ಪಷ್ಟವಾಗಿ ಕಂಡುಬಂದಿದ್ದರಿಂದ, ನಿವೃತ್ತ ಜಿಲ್ಲಾ ಹಾಗೂ ಸೆಶೆನ್ಸ್ ನ್ಯಾಯಾಧೀಶರಿಗೆ ವಹಿಸಲಾದ ಇಲಾಖಾ ವಿಚಾರಣೆಯ ಪ್ರಕ್ರಿಯೆಗೆ ಸಂಬಂಧಿಸಿದಂತೆ, ಆ ಹಂತದಲ್ಲಿ ಅವರನ್ನು ಬದಲಾಯಿಸುವಂತೆ ಹಾಗೂ ವಿಚಾರಣಾ ಸ್ಥಳವನ್ನು ಬದಲಾಯಿಸುವಂತೆ ಸದರಿ ಆಪಾದಿತ ಸರ್ಕಾರಿ ನೌಕರನು ಸಲ್ಲಿಸಲಾಗಿದ್ದ ಕೋರಿಕೆಯನ್ನು ಈ ನಿರ್ದೇಶನಾಲಯದ ಉಲ್ಲೇಖ (8) ರಲ್ಲಿನ ಆದೇಶದ ದಿನಾಂಕ 17.10.2008 ರಲ್ಲಿ ತಿರಸ್ಕರಿಸಲಾಗಿತ್ತು. ಹಾಗೂ ಸದರಿ ಆಪಾದಿತ ಸರ್ಕಾರಿ ನೌಕರನು ನಿವೃತ್ತ ಜಿಲ್ಲಾ ಹಾಗೂ ಸೆಶೆನ್ಸ್ ನ್ಯಾಯಾಧೀಶರ ವಿರುದ್ಧ ಅವರು **"ಪ್ರಭಾವಕ್ಕೆ ಒಳಗಾಗುತ್ತಾರೆಂಬ"** ಆಪಾದನೆ ಮಾಡಿರುವ ಕುರಿತು ಪ್ರತ್ಯೇಕವಾಗಿ ಸದರಿ ಸರ್ಕಾರಿ ನೌಕರನ ವಿರುದ್ಧ ಕ್ರಮ ಜರುಗಿಸುವುದನ್ನು ಪರಿಶೀಲಿಸಲಾಗುತ್ತಿದೆ.

ಉಲ್ಲೇಖ (9) ರಲ್ಲಿ ಸ್ವೀಕೃತಿಯಾದ ಸದರಿ ಆಪಾದಿತ ಸಾಂಖ್ಯಿಕ ನಿರೀಕ್ಷಕರ ವಿರುದ್ಧದ ಇಲಾಖಾ ವಿಚಾರಣಾ ವರದಿಯನ್ನು ಉಲ್ಲೇಖ (10) **ರ 2ನೇ ಕಾರಣ ಕೇಳುವ ಜ್ಞಾಪನದಲ್ಲಿ** ಸದರಿ ಆರೋಪಿತ ಸರ್ಕಾರಿ ನೌಕರನಿಗೆ ಜಾರಿ ಮಾಡಿ, ಆತನ ವಿವರಣೆ ಸಲ್ಲಿಸುವಂತೆ ಸೂಚಿಸಲಾಗಿತ್ತು. ಸದರಿ ಆರೋಪಿತ ಸರ್ಕಾರಿ ನೌಕರನು ಉಲ್ಲೇಖ (11) ರಲ್ಲಿ ಸಲ್ಲಿಸಿದ ಅವರ ವಿವರಣೆಯ ದಿನಾಂಕ:27.01.2009 ನ್ನು ಪರಿಶೀಲಿಸಲಾಗಿ, ಅವರ ಈ ಹೇಳಿಕೆಯಲ್ಲಿ ಈ ಪ್ರಕರಣದಲ್ಲಿನ ಸಹಿಗಳನ್ನು ವಿಧಿವಿಜ್ಞಾನ ಪ್ರಯೋಗಾಲಯಕ್ಕೆ ಕಳುಹಿಸುವ ಕುರಿತು ಮಾತ್ರ ನಮೂದಿಸಿದ್ದು, ಈ ಅಂಶವನ್ನು ನಿವೃತ್ತ ನ್ಯಾಯಾಧೀಶರ ಇಲಾಖಾ ವಿಚಾರಣೆ ವರದಿಯಲ್ಲಿ ಪ್ರಸ್ತಾಪಿಸಿ "ಭಾರತೀಯ ಸಾಕ್ಷಿ ಅಧಿನಿಯಮ ಕಲಂ: 45 ರಿಂದ 50 ರ ಮೇರೆಗೆ ನ್ಯಾಯಾಲಯವಾಗಲೀ ಅಥವಾ ವಿಚಾರಣಾಧಿಕಾರಿಗಳಾಗಲೀ ಅವುಗಳೇ ಮುಖ್ಯ ಆಧಾರವೆಂದು ಪರಿಗಣಿಸಲು ಆಗುವುದಿಲ್ಲವೆಂದು ದೋಷಾರೋಪಿತ ನೌಕರನು ಸುಳ್ಳು ಸಾಧಿಸುತ್ತಾರೆ ಎನ್ನುವುದಕ್ಕೆ ಸದರಿ ಸರ್ಕಾರಿ ನೌಕರನು ಸಲ್ಲಿಸಲಾಗಿದೆ ಎಂದು ವಾದಿಸುತ್ತಿರುವ **ದಾಖಲೆಯ ಮೇಲೆ ದಿನಾಂಕ:02.10.2006 ನ್ನು ಆ ದಿವಸ ಗಾಂಧಿಜಯಂತಿ ನಿಮಿತ್ತ ಸಾರ್ವಜನಿಕ ರಜೆ ಇದ್ದುದರಿಂದ ದಿನಾಂಕ:03.10.2006 ಎಂದು ತಿದ್ದಲಾಗಿದೆ ಎಂದು ಬರಿಗಣ್ಣಿಗೆ ಕಂಡುಬರುತ್ತಿದ್ದು**, ಈ ವಿಷಯಕ್ಕೆ ಸಂಬಂಧಿಸಿದಂತೆ ದೋಷಾರೋಪಿತ ನೌಕರನು ಮತ್ತು ಅವರ ಪರ ಹಾಜರಾಗಿದ್ದ **"ರಕ್ಷಣಾ ಸಹಾಯಕರು"** ಸಹ ಈ ಆರೋಪವನ್ನು ನಿರಾಕರಿಸಿಲ್ಲವಾದ್ದರಿಂದ, ಹಾಗೂ, ಸದರಿ ಆಪಾದಿತ ಸರ್ಕಾರಿ ನೌಕರನು 2ನೇ ಕಾರಣ ಕೇಳುವ ಜ್ಞಾಪನಕ್ಕೆ ಸಲ್ಲಿಸಿದ ಆತನ ವಿವರಣೆಯಲ್ಲಿ ಆತನ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ರಕ್ಷಿಸಿಕೊಳ್ಳಬಹುದಾದ ಯಾವುದೇ ಹೊಸ ಅಂಶಗಳು ಒಳಗೊಂಡಿಲ್ಲವಾದ್ದರಿಂದ ಆತನು ಸಲ್ಲಿಸಿದ ಲಿಖಿತ ಹೇಳಿಕೆಯನ್ನು ತಿರಸ್ಕರಿಸಲಾಗಿದೆ.

(8) ನಿವೃತ್ತ ಜಿಲ್ಲಾ ಹಾಗೂ ಸೆಶೆನ್ಸ್ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಗಳು ಸಲ್ಲಿಸಿದ ಉಲ್ಲೇಖ (9) ರಲ್ಲಿ ತಿಳಿಸಲಾದ ಇಲಾಖಾ ವಿಚಾರಣಾ ವರದಿಯನ್ನು ಪರಿಶೀಲಿಸಲಾಗಿ ಸದರಿ ಆರೋಪಿತ ಸಿಬ್ಬಂದಿಗೆ ಸಮರ್ಥಿಸಿಕೊಳ್ಳಲು / ಪ್ರತಿವಾದಿಸಲು ಸಾಕಷ್ಟು ಕಾಲಾವಕಾಶ ನೀಡಿ, ನಿರ್ಧಿಷ್ಟವಾದ ಹಾಗೂ ನ್ಯಾಯಯುತವಾದ ರೀತಿಯಲ್ಲಿ ಇಲಾಖಾ ವಿಚಾರಣೆ ಕೈಗೊಂಡಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ.

ಒಟ್ಟಾರೆ, ಆರೋಪಿತ ಸರ್ಕಾರಿ ನೌಕರನಾದ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ಇವರ ಮೇಲೆ ಹೊರಿಸಲಾದ ದೋಷಾರೋಪಣೆಗಳು ಹಾಗೂ ಆಪಾದಿತ ಸರ್ಕಾರಿ ನೌಕರರು ಸಲ್ಲಿಸಿರುವ ಹೇಳಿಕೆಗಳು ಮತ್ತು ವಿಚಾರಣಾ ಅಧಿಕಾರಿಗಳ ವರದಿಗಳು ಈ ಕೆಳಗಿನಂತೆ ಇರುತ್ತವೆ.

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ: 11 ಉಪನಿಯಮ: 23(1) ಮತ್ತು (2) ರಡಿ ವಿಚಾರಣಾ ವರದಿ

ಈ ಮೇಲೆ ನಮೂದಿಸಿದ ಇಲಾಖಾ ವಿಚಾರಣೆ ಪ್ರಕರಣದಲ್ಲಿ ಶಿಸ್ತು ಪ್ರಾಧಿಕಾರದ ಪರವಾಗಿ ಮಂಡನಾಧಿಕಾರಿಗಳು ಹಾಜರುಪಡಿಸಿದ ದಾಖಲೆಗಳನ್ನು ಪರಿಶೀಲಿಸಿ, ದೋಷಾರೋಪಿತ ಸರಕಾರಿ ನೌಕರರಿಗೆ ವಿಚಾರಣಾ ನೋಟೀಸನ್ನು ಜಾರಿ ಮಾಡಲಿಕ್ಕಾಗಿ ಅವರು ಮೊದಲಿಗೆ ವೈಯಕ್ತಿಕವಾಗಿ ಹಾಜರಾದರು. ಆ ನಂತರ ಅವರ ಅರ್ಜಿಯ ಮೇರೆಗೆ ಒಬ್ಬ ಇಲಾಖಾ ರಕ್ಷಣಾ ಸಹಾಯಕರನ್ನು ನೇಮಿಸಲಾಯಿತು. ಕೆಲವೊಂದು ಮುದ್ದತ್ತುಗಳಿಗೆ ಅವರು ಹಾಜರಾಗಿ ಆ ನಂತರ ಅವರಿಗೆ ತೀವ್ರ ಸ್ವರೂಪದ ಕಾಯಿಲೆಯಿಂದಾಗಿ ಅವರ ವಿನಂತಿ ಮೇರೆಗೆ ಅವರನ್ನು ಪ್ರಕರಣದಿಂದ ನಿವೃತ್ತಿಗೊಳಿಸಿ, ತದನಂತರ ದೋಷಾರೋಪಿತ ಸರಕಾರಿ ನೌಕರರು ವೈಯಕ್ತಿಕವಾಗಿ ಹಾಜರಿದ್ದರು.

2) ದೋಷಾರೋಪಿತ ಸರಕಾರಿ ನೌಕರರಿಗೆ ಅವರು ಇಲಾಖೆ ವಿಚಾರಣೆಗೆ ಹಾಜರಾದ ದಿನವೇ ಅನುಬಂಧ–1 ಮತ್ತು 2 ರಲ್ಲಿ ನಮೂದಿಸಿದ ದೋಷಾರೋಪಣೆಗಳನ್ನು ಅವರ ಮೇಲೆ ರುಜುವಾತುಪಡಿಸಲು ಅನುಬಂಧ–3 ಮತ್ತು 4 ರಲ್ಲಿ ನಮೂದು ಮಾಡಿದ ದಾಖಲೆಗಳು ಮತ್ತು ಸಾಕ್ಷಿದಾರರ ಬಗ್ಗೆ ತಿಳಿಸಿ ಹೇಳಲಾಯಿತು. ಅವರಿಗೆ ಅನುಬಂಧ–3 ರಲ್ಲಿ ನಮೂದು ಮಾಡಿದ ದಾಖಲೆಗಳಾಗಲೀ ಅಥವಾ ಪ್ರಕರಣಕ್ಕೆ ಸಂಬಂಧಿಸಿದ ಬೇರೆ ಯಾವುದೇ ಅವಶ್ಯಕ ದಾಖಲೆಗಳ ಪೂರೈಕೆ ಬಗ್ಗೆ ಸಹ ತಿಳಿಹೇಳಲಾಯಿತು. ಆ ನಂತರ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರ ನಿಯಮ: 11 ಹಾಗೂ ಉಪನಿಯಮ: 3ರ ಅಡಿ, ಅನುಬಂಧ–1 ಮತ್ತು 2 ರಲ್ಲಿ ದೂರಿರುವ ಹಾಗೆ ದೋಷಾರೋಪಣೆಗಳನ್ನು ಓದಿ ತಿಳಿಹೇಳಲಾಯಿತು. ದೋಷಾರೋಪಿತ ಸರಕಾರಿ ನೌಕರರು ತಮ್ಮ ಮೇಲಿನ ದೋಷಾರೋಪಣೆಗಳನ್ನು ಸ್ಪಷ್ಟವಾಗಿ ಅಲ್ಲಗಳೆದು, ತಾವು ಯಾವುದೇ ತಪ್ಪುಗಳನ್ನು ಮಾಡಿಲ್ಲ ಹಾಗೂ ಅವುಗಳಿಂದ ತಮ್ಮನ್ನು ತಾವೇ ಸಂರಕ್ಷಿಸಿಕೊಳ್ಳುವುದಾಗಿ ತಿಳಿಸಿದರು. ಆದ್ದರಿಂದ ಈ ಇಲಾಖಾ ವಿಚಾರಣೆಯನ್ನು ಮುಂದುವರಿಸಲಾಯಿತು.

3) ಅನುಬಂಧ–1 ಮತ್ತು 2 ರಲ್ಲಿ ನಮೂದಿಸಿದ ಹಾಗೆ, ಶಿಸ್ತು ಪ್ರಾಧಿಕಾರದ ಪರವಾಗಿ ದೋಷಾರೋಪಿತ ನೌಕರರ ಮೇಲೆ ದೋಷಾರೋಪಣೆಗಳೇನೆಂದರೆ, ಅವರು ಸಾಂಖ್ಯಿಕ ನಿರೀಕ್ಷಕರು ಅಂತಾ ಸರಕಾರಿ ನೌಕರರಾಗಿ ಕಾರ್ಯನಿರ್ವಹಿಸುತ್ತಿದ್ದು, ಪ್ರಸ್ತುತ ಬೆಳ್ತಂಗಡಿ ತಹಶೀಲ್ದಾರ ಕಚೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು ಅವರು ಹಾವೇರಿ ಜಿಲ್ಲಾ ಹಾನಗಲ್ ತಹಶೀಲ್ದಾರ ಕಚೇರಿಯಿಂದ ಅಮಾನತ್ತಿನಲ್ಲಿದ್ದಾಗ, ದಿನಾಂಕ:03.10.2006 ರಂದು ಹಾವೇರಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಗೆ ಮಾಹಿತಿ ಹಕ್ಕು ಅಧಿನಿಯಮದಡಿ ಅರ್ಜಿ ಸಲ್ಲಿಸಲು ಭೇಟಿ ನೀಡಿ ಮಾಹಿತಿ ಕೋರಿದ ಅರ್ಜಿಯನ್ನು ಸಲ್ಲಿಸಲು ಅರ್ಜಿಯ ಮೇಲೆ ಕಚೇರಿಯ ಮೊಹರನ್ನು ಅನಧಿಕೃತವಾಗಿ ದಾಖಲಿಸಿಕೊಂಡು ನಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಹಾವೇರಿ ಇವರು ತಮಗೆ ಮಾಹಿತಿ ನೀಡಿಲ್ಲವೆಂದು, ದಿನಾಂಕ:18.11.2006 ರಂದು ನೇರವಾಗಿ ರಾಜ್ಯ ಮಾಹಿತಿ ಆಯೋಗಕ್ಕೆ ಸಲ್ಲಿಸಲಾದ ಅವರ ದೂರು ಮತ್ತು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಹಾವೇರಿ ಇವರು ಕರ್ನಾಟಕ ಮಾಹಿತಿ ಆಯೋಗಕ್ಕೆ ನೇರವಾಗಿ ಸಲ್ಲಿಸಲಾದ ಪತ್ರದ ಸಂಖ್ಯೆ: ಜಿಸಂಹಾ/ಆಡಳಿತ/ಮಾಹ/06–07 ದಿನಾಂಕ:27.01.2007 ಇದನ್ನು ಪರಿಶೀಲಿಸಿ, ದಿನಾಂಕ:07.02.2007 ರಂದು ಮಾಹಿತಿ ಆಯೋಗದಲ್ಲಿ ವಿಚಾರಣೆ ನಿಗದಿಪಡಿಸಲಾಗಿತ್ತು. ಅದರಂತೆ ರಾಜ್ಯ ಪ್ರಧಾನ ಮಾಹಿತಿ ಆಯುಕ್ತರು ದಿನಾಂಕ 7–2–2007 ರಂದು ವಿಚಾರಣೆ ಏರ್ಪಡಿಸಿ ಇನ್ನಿತರ ಆದೇಶಗಳೊಂದಿಗೆ "Directorate of Economics and Statistics is also directed to inquire into the misplacing of the complainant's application filed under the Right to Information Act and to take action on proposal for disciplinary proceedings sent by the District Statistical Officer" ಎಂದು ಆದೇಶಿಸಿದ್ದರಿಂದ, ಹಾಗೂ ಇದೇ ವಿಷಯಕ್ಕೆ ಸಂಬಂಧಪಟ್ಟಂತೆ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರು ಪೂರ್ವಭಾವಿ ವಿಚಾರಣೆ ನಡೆಸಿ, ದಿನಾಂಕ: 12.05.2007 ರಂದು ಸಲ್ಲಿಸಿದ ವರದಿಯಲ್ಲಿ, **"ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ದಿನಾಂಕ: 03.10.2006 ರಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಹಾವೇರಿ ಇವರಿಗೆ ಮಾಹಿತಿ ಹಕ್ಕು ಅಧಿನಿಯಮದಡಿ ಸಲ್ಲಿಸಲಾಗಿದೆ ಎಂಬ ಅರ್ಜಿಗೆ ಕಚೇರಿಯ ಮೊಹರನ್ನು ಅನಧಿಕೃತವಾಗಿ ಬಳಸಿಕೊಂಡಿರುವುದು ಮೇಲ್ನೋಟಕ್ಕೆ ಕಂಡುಬಂದಿರುತ್ತದೆ"** ಎಂಬ ಅಭಿಪ್ರಾಯ ನೀಡಿದ್ದರಿಂದ, ಈ ಇಲಾಖಾ ವಿಚಾರಣೆಯನ್ನು ಅವರ ಮೇಲೆ ನಡೆಸಲಾಗಿದೆ. ಅದರಂತೆ ದೋಷಾರೋಪಿತ ಸರಕಾರಿ ನೌಕರರು ದಿನಾಂಕ:05.06.2006 ರಿಂದ 25.03.2007 ರ ವರೆಗಿನ ಅಮಾನತ್ತು ಅವಧಿಯಲ್ಲಿ ದಿನಾಂಕ:03.10.2006 ರಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ಹಾವೇರಿ ಇವರ ಕಚೇರಿಗೆ ಬೇಟಿ ನೀಡಿ ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮದಡಿ ಅರ್ಜಿ ಸಲ್ಲಿಸಲು ಬಂದಿರುವುದಾಗಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಯವರಿಗೆ ಮನದಟ್ಟು ಮಾಡಿಕೊಟ್ಟು ಅಂದು ಕಚೇರಿಯಲ್ಲಿ ಉಪಸ್ಥಿತರಿದ್ದ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಯಾದ ಶ್ರೀ ಎನ್.ಎಸ್. ನಾಗಶೆಟ್ಟಿ

ಅವರಿಗೆ ಅಥವಾ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯಾದ ಮತ್ತು ಸಹಾಯಕ ನಿರ್ದೇಶಕರಾದ ಶ್ರೀ ಸಿ.ಎಸ್. ಚಿಕ್ಕಮಠ ಇವರಿಗೆ ತಮ್ಮ ಉದ್ದೇಶಿತ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಆದರೆ ಕಚೇರಿಯ ಸ್ವೀಕೃತಿ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಜಿ.ವಿ. ಸುಕ್ತೆ, ಇವರ ಅನುಪಸ್ಥಿತಿಯಲ್ಲಿ ಕಚೇರಿಯ ಮೊಹರನ್ನು ಅನಧಿಕೃತವಾಗಿ ಉದ್ದೇಶಿತ ಅರ್ಜಿಯ ಮೇಲೆ ದಾಖಲಿಸಿಕೊಂಡು ಶ್ರೀ ಜಿ.ವಿ. ಸುಕ್ತೆ ಇವರ ರುಜುವನ್ನು ಹೋಲುವಂತೆ ಸ್ವೀಕೃತಿಗಾಗಿ ನಕಲಿ ಸಹಿ ದಾಖಲಿಸಿಕೊಂಡಿರುವುದಾಗಿ ಹಾಗೂ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ಸ್ವೀಕೃತಿಗೆ ಉಪಯೋಗಿಸುವ ದುಂಡನೆಯ ಮೊಹರಿನ ಬದಲಾಗಿ ರವಾನೆಗೆ ಉಪಯೋಗಿಸುವ ಮೊಹರನ್ನು ಅರ್ಜಿಯಲ್ಲಿ ದಾಖಲಿಸಿಕೊಂಡಿದ್ದಾರೆ. ಈ ಕುರಿತು ಹಾವೇರಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ ಇವರು ಶ್ರೀ ಜಿ.ವಿ. ಸುಕ್ತೆ ಇವರಿಗೆ ಜಾರಿ ಮಾಡಿದ ಕಾರಣ ಕೇಳುವ ನೋಟೀಸು ಹಾಗೂ ಶ್ರೀ ಜಿ.ವಿ. ಸುಕ್ತೆ ಸಲ್ಲಿಸಿರುವ ಉತ್ತರಗಳನ್ನು ಗಮನಿಸಲಿಕ್ಕಾಗಿ ದೋಷಾರೋಪಿತ ಸರಕಾರಿ ನೌಕರರು ಕಚೇರಿಯ ಮೊಹರನ್ನು ಅನಧಿಕೃತವಾಗಿ ಉಪಯೋಗಿಸಿಕೊಂಡಿದ್ದು ಹಾಗೂ ನಕಲಿ ಅರ್ಜಿ ಸೃಷ್ಟಿ ಮಾಡಿದ್ದು ಸರಿ ಎಂದು ಕಂಡುಬರುತ್ತದೆ. ಇದಾದ ನಂತರ 45 ದಿನಗಳು ಗತಿಸಿದ ಮೇಲೆ ಅಂದರೆ ದಿನಾಂಕ:18.11.2006 ರಂದು ಮೂಲ ಅರ್ಜಿಯ ನೆರಳಚ್ಚು ಪ್ರತಿಯನ್ನು ಆಧಾರವಾಗಿಟ್ಟುಕೊಂಡು ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಯವರು ಮಾಹಿತಿ ಕೋರಲಾದ ದೋಷಾರೋಪಿತ ಸರಕಾರಿ ನೌಕರರ ಅರ್ಜಿಗೆ "ನಿಗದಿತ ಅವಧಿ ಮೀರಿದ್ದರೂ ಮಾಹಿತಿಯನ್ನು ನೀಡದೇ ಇರುವುದು ಹಾಗೂ ನಿರಾಕರಿಸಿದರೆಂದು" ನೇರವಾಗಿ ಕರ್ನಾಟಕ ಮಾಹಿತಿ ಹಕ್ಕು ಆಯುಕ್ತರಿಗೆ ಮೇಲ್ಮನವಿ ಅರ್ಜಿ ಸಲ್ಲಿಸಿದರು. ಹಾಗೂ ಅವರ ಅರ್ಜಿಯ ಅನ್ವಯ ಕರ್ನಾಟಕ ಮಾಹಿತಿ ಆಯೋಗ ದಿನಾಂಕ:07.02.2007 ರಂದು ವಿಚಾರಣೆಯನ್ನು ನಡೆಸಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ದಿನಾಂಕ:25.01.2007 ರಂದು ಪತ್ರ ಸಂಖ್ಯೆ: ಜಿಸಂಹಾ/ಆಡಳಿತ/ ಮಾಹ/ಅ/2006–07/2026–28ರ ಮೂಲಕ ದೋಷಾರೋಪಿತ ಸರಕಾರಿ ನೌಕರರು ಹೇಳಿದ ಮಾಹಿತಿಯನ್ನು ಒದಗಿಸಿದ್ದನ್ನು ಒಪ್ಪಿಕೊಂಡು, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಸಲ್ಲಿಸಿದ ಪತ್ರ ಸಂಖ್ಯೆ: ಜಿಸಂಹಾ/ಆಡಳಿತ/ ಮಾಹಅ/06–07/2042–44 ದಿನಾಂಕ:27.01.2007 ರನ್ವಯ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿಯಲ್ಲಿ ದೋಷಾರೋಪಿತ ನೌಕರರ ಅರ್ಜಿಯು "ಮಿಸ್ಸಿಂಗ್", ಕಾಣೆಯಾದ ಕುರಿತು ಇಲಾಖಾ ವಿಚಾರಣೆಯನ್ನು ನಡೆಸಲು ಕರ್ನಾಟಕ ಮಾಹಿತಿ ಆಯೋಗದ ಆದೇಶದ ದಿನಾಂಕ:07.02.2007 ರಂದು ಆದೇಶಿಸಲಾಗಿದೆ. ಅದರಂತೆ ನಂತರ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು, ದಾವಣಗೆರೆ ಜಿಲ್ಲೆ ಇವರು ಪೂರ್ವಭಾವಿ ವಿಚಾರಣೆ ಕೈಗೊಂಡು ದಿನಾಂಕ:12.05.2007 ರಂದು ಸಲ್ಲಿಸಿದ ಅರ್ಜಿಯಲ್ಲಿ, "ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ದಿನಾಂಕ:03.10.2006 ರಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಹಾವೇರಿ ಇವರಿಗೆ ಮಾಹಿತಿ ಹಕ್ಕು ಅಧಿನಿಯಮದಡಿ ಸಲ್ಲಿಸಲಾಗಿದೆ ಎಂಬ ಅರ್ಜಿಗೆ ಕಚೇರಿಯ ಮೊಹರನ್ನು ಅನಧಿಕೃತವಾಗಿ ಬಳಸಿಕೊಂಡಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ", ಎಂದು ಅಭಿಪ್ರಾಯ ನೀಡಿದ್ದರಿಂದ, ಅಮಾನತ್ತಿನಲ್ಲಿದ್ದ ಅವಧಿಯಲ್ಲಿ ಹಾವೇರಿ ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಯವರ ಕಚೇರಿಯಲ್ಲಿ ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮವನ್ನು ದುರ್ಬಳಕೆ ಮಾಡಿಕೊಂಡಿರುವುದು ಮೇಲ್ನೋಟಕ್ಕೆ ಸಾಬೀತಾಗಿದೆ. ಆದ್ದರಿಂದ ದೋಷಾರೋಪಿತ ಸರಕಾರಿ ನೌಕರರು ಕರ್ನಾಟಕ ನಾಗರಿಕ ಸೇವಾ (ನಡತೆ) 1966 ರ ನಿಯಮ 3 ಹಾಗೂ 27ನ್ನು ಉಲ್ಲಂಘನೆ ಮಾಡಿ ಗಂಭೀರ ಸ್ವರೂಪದ ದುರ್ನಡತೆಯಿಂದ ನಡೆದುಕೊಂಡು ನಿಯಮಾವಳಿಗಳ ಪ್ರಕಾರ ದಂಡನಾರ್ಹವಾದ ದೋಷಾರೋಪಣೆ ಮಾಡಿದ್ದಾರೆಂದು ಆರೋಪಣೆ ಮಾಡಲಾಗಿದೆ.

4) ಈ ಮೇಲೆ ನಿರೀಕ್ಷಿಸಿರುವ ಹಾಗೆ, ಈ ಮೇಲಿನ ದೋಷಾರೋಪಣೆಗಳನ್ನು ದೋಷಾರೋಪಿತ ಸರಕಾರಿ ನೌಕರರು ಸಂಪೂರ್ಣವಾಗಿ ಅಲ್ಲಗಳೆದು, ಈ ವಿಚಾರಣೆಯಲ್ಲಿ ಸಲ್ಲಿಸಿದ ದಿನಾಂಕ:10.09.2008 ರ ತಮ್ಮ ಲಿಖಿತ ಸಂರಕ್ಷಣಾ ಹೇಳಿಕೆಯಲ್ಲಿ ದಿನಾಂಕ:05.06.2006 ರಿಂದ ತಾವು ಅಮಾನತ್ತಿನಲ್ಲಿ ಇದ್ದ ಕಾರಣ ಬೇಗನೆ ಮರುನೇಮಕಾತಿ ಪಡೆಯಲು ಹಾಗೂ ಮೇಲಾಧಿಕಾರಿಗಳಿಗೆ ತನ್ನ ಯಾವ ತಪ್ಪೂ ಇಲ್ಲವೆಂದು ಸಮರ್ಥಿಸಲು ಕೆಲವು ಮಾಹಿತಿಗಳು ಅವಶ್ಯವಿದ್ದ ಕಾರಣ ಅವುಗಳನ್ನು ಪಡೆಯಲು ಆರ್.ಟ.ಐ. ನಿಯಮ 2006 ರ ಅಡಿಯಲ್ಲಿ ದಿನಾಂಕ 03.10.2006ರಂದು ಡಿ.ಎಸ್.ಒ. ಹಾವೇರಿ ಇವರ ಕಚೇರಿಗೆ ಭೇಟಿ ನೀಡಿ, ಅಂದು ಕಾರ್ಯನಿರ್ವಹಿಸುತ್ತಿದ್ದ "ಆವಕ–ಜಾವಕ" ವಿಭಾಗದ ವಿಷಯ ನಿರ್ವಾಹಕ ಶ್ರೀ ಜಿ.ವಿ. ಸುಕ್ತೆ ಇವರಲ್ಲಿ ಮನವಿ ಸಲ್ಲಿಸಿ ಸ್ವೀಕೃತಿ ಬಗ್ಗೆ ಮೊಹರಿನೊಂದಿಗೆ ಸಹಿ ಪಡೆದಿರುತ್ತೇನೆ. ರವಾನೆ ಸಹಾಯಕ ಮೊಹರನ್ನು ಶ್ರೀ ಜಿ.ವಿ. ಸುಕ್ತೆ ಇವರೇ ಹಾಕಿ ಕೊಟ್ಟಿದ್ದು ಇರುತ್ತದೆ. ಆದರೆ ಫೋರ್ಜರಿ ಸಹಿ, ಮೊಹರುಗಳ ದುರ್ಬಳಕೆ, ಗಂಭೀರ ದುರ್ನಡತೆಯೆಂಬ ಪದಗಳ ಬಳಕೆಯೊಂದಿಗೆ ಆಪಾದಿಸುತ್ತಿರುವುದರಿಂದ ಅತೀವ ಮಾನಸಿಕ ಹಿಂಸೆ, ತೇಜೋವಧೆ, ಅಪಮಾನವಾಗುತ್ತಿದೆ. ತಾವು ಅಮಾನತ್ತಿನಲ್ಲಿ ಇದ್ದಾಗ ಮನೆ ವಿಳಾಸಕ್ಕೆ "ಡಿ.ಎಸ್.ಒ", ಹಾವೇರಿ ಇವರಿಂದ ಕೆಲವು ಟಪಾಲುಗಳು ಅಂಚೆ ಮೂಲಕ ಬಂದಿದ್ದು, ಶ್ರೀ ಜಿ.ವಿ. ಸುಕ್ತೆ ವಿಷಯ ನಿರ್ವಾಹಕರಿಂದ ರವಾನಿಸಲ್ಪಟ್ಟು ಅದಕ್ಕೆ ಸಂಬಂಧಿಸಿದ ಲಕೋಟೆಗಳ ಜೆರಾಕ್ಸ್ ಪ್ರತಿಗಳನ್ನು

ಹೇಳಿಕೆಯೊಂದಿಗೆ ತಮ್ಮ ಅವಗಾಹನೆಗೆ ಸಲ್ಲಿಸಿರುತ್ತೇನೆ. ಈ ಮೂರು ಲಕೋಟೆಗಳು 12:06ರ ತಿಂಗಳಲ್ಲಿ ರವಾನೆಯಾಗಿದ್ದು ರವಾನೆ ಸಹಾಯಕರ ಸಹಿ ಹಾಗೂ ತಾವು ಸ್ವೀಕೃತ ಪಡೆದ ಮನವಿ ಮೇಲಿನ ಸಹಿಗಳನ್ನು ತಾವುಗಳು ಪರಾಮರ್ಶಿಸಿ, ಫೋರ್ಜರಿ ಸಹಿ ಮೊಹರುಗಳ ದುರ್ಬಳಕೆ, ಗಂಭೀರ ದುರ್ನಡತೆ ಎಂಬ ಆಪಾದನೆಗಳಿಂದ ತಮ್ಮನ್ನು ಮುಕ್ತಗೊಳಿಸಲು ವಿನಂತಿಸಿಕೊಂಡಿದ್ದಾರೆ.

5) ಕಾರಣ, ಶಿಸ್ತು ಪ್ರಾಧಿಕಾರದ ಪರವಾಗಿ ದೋಷಾರೋಪಿತ ಸರಕಾರಿ ನೌಕರರ ಮೇಲೆ ಇಲಾಖೆ ವತಿಯಿಂದ ದೋಷಾರೋಪಣೆಗಳನ್ನು ಸಿದ್ಧ ಮಾಡಲು ಮಂಡನಾಧಿಕಾರಿಗಳು ಒಟ್ಟಿಗೆ ಐದು ಜನ ಸಾಕ್ಷಿದಾರರು, ಅಂದರೆ ಪಿಡಬ್ಲೂ–1 ರಿಂದ 5 ಇವರ ವಿಚಾರಣಾ ಹೇಳಿಕೆಯ ಜೊತೆಯಲ್ಲಿ ನಿಶಾನೆ ಪಿ–1 ರಿಂದ 8ರ ವರೆಗಿನ ದಾಖಲೆಗಳನ್ನು ಗುರುತಿಸಿಕೊಂಡು ತಮ್ಮ ಬದಿಯನ್ನು ಕೊನೆಗೊಳಿಸಿಕೊಂಡಿದ್ದಾರೆ. ನಂತರ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ–11 ಹಾಗೂ ಉಪನಿಯಮ 18ರ ಅಡಿ, ದೋಷಾರೋಪಿತ ಸರಕಾರಿ ನೌಕರರನ್ನು ವಿಚಾರಿಸಿ ಅವರ ಹೇಳಿಕೆಗಳನ್ನು ಪಡೆದುಕೊಳ್ಳಲಾಯಿತು. ದೋಷಾರೋಪಿತ ಸರಕಾರಿ ನೌಕರರು ತಮ್ಮ ಪರವಾಗಿ ಯಾವುದೇ ಸಾಕ್ಷಿ ವಿಚಾರಣೆಯನ್ನು ಮಾಡಿಕೊಂಡು ಹೇಳಿಕೆಗಳನ್ನು ಪಡೆದುಕೊಂಡಿಲ್ಲ. ಆದರೆ ಶಿಸ್ತು ಪ್ರಾಧಿಕಾರಗಳ ಪರ ವಿಚಾರಣೆಯಾದ ಸಾಕ್ಷಿದಾರರ ಪಾಟೀ ಸವಾಲಿನಲ್ಲಿ ನಿಶಾನೆ ಡಿ–1 ರಿಂದ 6ರ ವರೆಗಿನ ದಾಖಲೆಗಳನ್ನು ಗುರುತಿಸಿಕೊಂಡು ತಮ್ಮ ಬದಿಯನ್ನು ಕೊನೆಗೊಳಿಸಿಕೊಂಡಿದ್ದಾರೆ. ಇದಾದ ನಂತರ ಇಬ್ಬದಿಯವರು ತಮ್ಮ ತಮ್ಮ ಲಿಖಿತ ವಾದ–ಪ್ರತಿವಾದ ಪತ್ರಗಳನ್ನು ಸಲ್ಲಿಸಿದ್ದಾರೆ.

6) ಕಾರಣ, ಈ ಮೇಲಿನ ದೋಷಾರೋಪಣೆಗಳು, ಸಂರಕ್ಷಣಾ ಹೇಳಿಕೆ ಹಾಗೂ ಸಾಕ್ಷಿ ಪುರಾವೆಗಳನ್ನು ಪರಿಶೀಲಿಸಿ ನಾನು ಈ ವಿಚಾರಣೆಯಲ್ಲಿ ತೀರ್ಮಾನಿಸಲು ಉದ್ಭವವಾಗುವ ಅಂಶ ಏನೆಂದರೆ:

**ಅಂಶ**

ಮಂಡನಾಧಿಕಾರಿಗಳು ಶಿಸ್ತು ಪ್ರಾಧಿಕಾರದ ಪರವಾಗಿ ದೋಷಾರೋಪಿತ ಸರಕಾರಿ ನೌಕರರ ಮೇಲೆ ಮಾಡಲಾದ ದೋಷಾರೋಪಣೆಗಳನ್ನು ಈ ವಿಚಾರಣೆಯ ಪ್ರಕರಣದಲ್ಲಿ ನಿಸ್ಸಂದೇಹವಾಗಿ ರುಜುವಾತು ಪಡಿಸಿದ್ದಾರೆಯೆ?

ಈ ಮೇಲಿನ ಅಂಶವನ್ನು ನಾನು ಸಕಾರಾತ್ಮಕವಾದ ಈ ಕೆಳಕಂಡ ಕಾರಣಗಳ ಸಲುವಾಗಿ ಉತ್ತರಿಸುತ್ತೇನೆ.

**ಕಾರಣಗಳು**

7) ಈ ಇಲಾಖಾ ವಿಚಾರಣಾ ಪ್ರಕರಣದಲ್ಲಿ ನಾವು ಅತೀ ಮುಖ್ಯವಾಗಿ ಗಮನದಲ್ಲಿಡುವ ಸಂಗತಿಗಳು ಏನೆಂದರೆ, ಅನುಬಂಧ–1 ಮತ್ತು 2 ರಲ್ಲಿ ನಮೂದ ಮಾಡಿರುವ ದೋಷಾರೋಪಣೆಗಳನ್ನು ದೋಷಾರೋಪಿತ ಸರಕಾರಿ ನೌಕರರ ಮೇಲೆ ರುಜುವಾತು ಪಡಿಸಲು ಅನುಬಂಧ–3 ರಲ್ಲಿ ನಮೂದಿಸಿದ ದಾಖಲೆಗಳು ಹಾಗೂ ಅನುಬಂಧ–4 ರಲ್ಲಿ ನಮೂದಿಸಿದ ಸಾಕ್ಷಿದಾರರು ಅತೀ ಮುಖ್ಯವಾಗಿರುತ್ತದೆ. ಅದರಂತೆ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು ಹಾಗೂ ನೈಸರ್ಗಿಕ ನಿಯಮಗಳ ಪಾಲನೆಯೂ ಅತೀ ಅವಶ್ಯವಾಗಿರುತ್ತದೆ. ಅದರಂತೆ ದಂಡ ಪ್ರಕ್ರಿಯಾ ಸಂಹಿತೆ ಮತ್ತು ಭಾರತೀಯ ದಂಡ ಸಂಹಿತೆ ಇವುಗಳ ನಿಯಮಗಳು ಹಾಗೂ ಸಾಕ್ಷಿ ಅಧಿನಿಯಮಗಳ ಮೇರೆಗೆ ಯಾವುದೇ ಒಬ್ಬ ದೋಷಾರೋಪಿತ ನೌಕರನು ಪ್ರಾರಂಭದಲ್ಲಿಯೇ ದೋಷಿಯೆಂದು ತೀರ್ಮಾನಕ್ಕೆ ಬರಲು ಆಗುವುದಿಲ್ಲ. ಕಾರಣ ಒಂದು ನೂರು ಜನ ಅಪರಾಧಿಗಳು ಶಿಕ್ಷೆಯಿಂದ ಪಾರಾಗಬಹುದು. ಆದರೆ ಒಬ್ಬ ನಿರಪರಾಧಿಗೆ ಶಿಕ್ಷೆ ಮಾಡಲು ಬರುವುದಿಲ್ಲ ಅನ್ನುವ ತತ್ವವನ್ನು ಇಲಾಖಾ ಪ್ರಕರಣಗಳಿಗೂ ಅನ್ವಯವಾಗುತ್ತವೆ ಎನ್ನುವುದನ್ನು ಬಹಳ ಹಿಂದೆಯೇ ಮಾನ್ಯ ವರಿಷ್ಠ ನ್ಯಾಯಾಲಯವು ತೀರ್ಮಾನಿಸಿದೆ. ಇದಕ್ಕೆ ಉದಾಹರಣೆ ಅಂದರೆ ಭಾರತೀಯ ಒಕ್ಕೂಟ ವಿರುದ್ಧ ಹೆಚ್.ಸಿ. ಗೋಯಲ್, ಎ.ಐ.ಆರ್.1964 ಪುಟ 364, ಇದರಲ್ಲಿ ನಾವು ಈ ಮೇಲಿನ ಅಂಶವನ್ನು ಪರಾಮರ್ಶಿಸಬಹುದು. ಈ ಮುಖ್ಯ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಈ ಇಲಾಖಾ ಪ್ರಕರಣದ ವಿಚಾರಣೆಯನ್ನು ವಿಶ್ಲೇಷಣೆ ಮಾಡೋಣ.

8) ದೋಷಾರೋಪಿತ ಸರಕಾರಿ ನೌಕರರು ಗಡುತರ ಮತ್ತು ಗಂಭೀರ ಸ್ವರೂಪದ ಅಪರಾಧಗಳನ್ನು ಮಾಡಿದ್ದಕ್ಕೆ ಮೊದಲನೆಯದಾಗಿ ಅವರು ದಿನಾಂಕ:03.10.2006 ರಂದು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಹಾವೇರಿ ಇವರಲ್ಲಿ ತಾವು ನಿಶ್ಚಿತವಾಗಿ ಮತ್ತು ಖಡಾಖಂಡಿತವಾಗಿ ಸಂಬಂಧಪಟ್ಟ ವಿಷಯ ನಿರ್ವಾಹಕರ ಮುಂದೆ ಸಲ್ಲಿಸಿ ಅವರ ಸಹಿ ಮತ್ತು ಮೊಹರನ್ನು ಪಡೆದಿರುವುದಾಗಿ ಪ್ರತಿಪಾದಿಸಿದ್ದಾರೆ. ಇದಕ್ಕೆ ವಿರುದ್ಧವಾಗಿ ಇಲಾಖೆಯವರು ಅವರು ಅಂತಹ ಅರ್ಜಿಯನ್ನು ಆ ದಿವಸ ಯಾವ ಕಾಲಕ್ಕೂ ಸಲ್ಲಿಸಿಲ್ಲ. ಆದರೆ ಅಪರಾಧಿ ಮನೋಭಾವನೆಯಿಂದ ಸುಳ್ಳು ದಸ್ತಾವೇಜು ಮತ್ತು ಖೊಟ್ಟಿ ರುಜುಗಳನ್ನು ತಾವೇ ಸೃಷ್ಟಿಸಿ, ಇಡೀ ಇಲಾಖೆಗೆ ಮೋಸ ಮಾಡುವ ಮನೋವೃತ್ತಿಯವರೆಂದು ದೂರುತ್ತಾರೆ. ಈ ದೂರುಗಳನ್ನು ಸುಸ್ಪಷ್ಟವಾಗಿ ರುಜುವಾತು ಪಡಿಸಲು ಪಿಡಬ್ಲೂ–1 ರಿಂದ 5ನೇ ರವರ ಇಲಾಖೆಗೆ ಸಂಬಂದಪಟ್ಟ ಜವಾಬ್ದಾರಿಯುಳ್ಳ ಸಾಕ್ಷಿದಾರರ ಹೇಳಿಕೆಗಳ ಜೊತೆಯಲ್ಲಿ ನಿಶಾನೆ ಪಿ–1 ರಿಂದ 8ರ ವರೆಗಿನ ದಾಖಲೆಗಳನ್ನು ಆದ'ರಿಸುತ್ತಾರೆ. ಪಿಡಬ್ಲೂ–1 ಶ್ರೀ ಬಸನಗೌಡ, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು,

ದಾವಣಗೆರೆ ಇವರು ಶಿಸ್ತು ಪ್ರಾಧಿಕಾರದಿಂದ ಆದೇಶ ಪಡೆದು ದಿನಾಂಕ:11.05.2007 ರಂದು ತಮ್ಮ ಪೂರ್ವಭಾವಿ ವಿಚಾರಣೆ ನಡೆಸಿ ಪಿಡಬ್ಲೂ–2 ರಿಂದ 5 ರವರಗೆ ನಿಶಾನೆ ಪಿ–6 ರಿಂದ 8ರ ವರೆಗಿನ ಹೇಳಿಕೆಗಳನ್ನು ಪಡೆದುಕೊಂಡು ನಿಶಾನೆ ಪಿ–1ರ ವರದಿಯನ್ನು ಇಲಾಖಾ ಮುಖ್ಯಸ್ಥರಿಗೆ ದಿನಾಂಕ:12.05.2007ರಂದು ಸಲ್ಲಿಸಿದ್ದಾರೆ. ಅವರ ವರದಿ ಮತ್ತು ಈ ವಿಚಾರಣೆಯಲ್ಲಿ ಅವರು ಹೇಳಿಕೆ ನೀಡಿದ್ದು ಏನೆಂದರೆ ತಮ್ಮ ಪೂರ್ವಭಾವಿ ವಿಚಾರಣೆ ತಮ್ಮ ಪ್ರಾಥಮಿಕ ವರದಿ ಮತ್ತು ಸಾಕ್ಷಿದಾರರ ಹೇಳಿಕೆಗಳು ಹಾಗೂ ಅವಶ್ಯವಿದ್ದ ಪಿ–2 ಮತ್ತು 3 ರ ದಾಖಲೆಗಳು, ಹಾಜರಾತಿ ಪುಸ್ತಕದ ಮೇಲಿನ ಪಿಡಬ್ಲೂ–4 ಶ್ರೀ ಜಿ.ವಿ. ಸುಕ್ತೆ, ವಿಷಯ ನಿರ್ವಾಹಕರು, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಹಾವೇರಿ ಇವರ ಮಾದರಿಯ ಚಿಕ್ಕ ಮತ್ತು ದೊಡ್ಡ ಸಾಮಾನ್ಯವಾದ ಸಹಿಗಳು, ಕಚೇರಿಯ ಆವಕ ಮತ್ತು ಜಾವಕಕ್ಕೆ ಸಂಬಂಧಪಟ್ಟ ಕಚೇರಿಯ ಮೊಹರುಗಳು, ರವಾನೆಗೆ ಸಂಬಂಧಪಟ್ಟಂತೆ ಉದ್ದನೆಯ ಮೊಹರು ಮತ್ತು ಸ್ವೀಕೃತಿಗಾಗಿ ದುಂಡನೆಯ ಮೊಹರನ್ನು ಬಳಸಲಾಗುತ್ತಿದೆ ಅನ್ನುವುದು ಎಲ್ಲರೂ ಒಪ್ಪಿಕೊಳ್ಳುವ ಸಂಗತಿಯಾಗಿದೆ. ಇದಕ್ಕೆ ಯಾರದೂ ಭಿನ್ನಭಿಪ್ರಾಯ ಇರುವುದಿಲ್ಲ. ಈ ದಾಖಲೆಯನ್ನು ನಿಶಾನೆ ಪಿ–2 ರಂದು ಈ ಪ್ರಕರಣದಲ್ಲಿ ಗುರುತಿಸಲಾಗಿದೆ. ನಿಶಾನೆ ಪಿ–2 ಕ್ಕೆ ದೋಷಾರೋಪಿತ ನೌಕರರ ಆಕ್ಷೇಪಣೆ ಎಂದರೆ ನಿಶಾನೆ ನಂ.ಪಿ–2ರ ದಾಖಲೆಯನ್ನು ಪಿಡಬ್ಲೂ–1 ಬಸನಗೌಡ ಇವರು ತಮ್ಮ ಸಮಕ್ಷಮ ಎಂದು ದೃಢೀಕರಿಸಿರುವುದಿಲ್ಲ. ಆದ್ದರಿಂದ ಈ ದಾಖಲೆಯನ್ನು ನಾವು ಈ ವಿಚಾರಣೆಯಲ್ಲಿ ಅಧಿಕೃತವಾಗಿ ಒಪ್ಪಲಾಗುವುದಿಲ್ಲ ಎಂದು ಹೇಳಿದ್ದಾರೆ. ಆದರೆ ಇದಕ್ಕೆ ಪಿಡಬ್ಲ್ಯೂ–1 ಬಸನಗೌಡರ ಇವರು ಬಹಳ ಚೆನ್ನಾಗಿ ಎಲ್ಲಾರು ಒಪ್ಪುವಂತೆ ಅದನ್ನು ನನ್ನ ಸ್ವಮತ ಹಸ್ತಾಕ್ಷರದಲ್ಲಿ ಬರೆದಿದ್ದು ಸಂಬಂಧಪಟ್ಟ ಮೊಹರುಗಳು ಮತ್ತು ಪಿಡಬ್ಲೂ–4 ಸುಕ್ತೆ ಇವರ ಅದರ ಮೇಲಿನ ಸಹಿಗಳನ್ನು ನಾನೇ ನನ್ನ ಸಮಕ್ಷಮ ಪಡೆದುಕೊಂಡಿದ್ದುದು ಇದೆಯೆಂದು ಹೇಳಿದ್ದಾರೆ. ಇನ್ನು ಮುಂದೆ ದೋಷಾರೋಪಿತ ನೌಕರರ ಅತೀ ದೊಡ್ಡ ಕಷ್ಟವೇನೆಂದರೆ, ತಾನು ಹಾಜರುಪಡಿಸಿದ ನಿಶಾನೆ ನಂ.ಡಿ–1ರ ದಾಖಲೆ ಮತ್ತು ಇಲಾಖೆಯವರು ಹಾಜರುಪಡಿಸಿದ ನಿಶಾನೆ ನಂ.ಪಿ–3ರ ದಾಖಲೆಗಳು ಒಂದೇ ಇದ್ದು ಪಿಡಬ್ಲೂ–4 ಮತ್ತು 5 ಇವರು ನಿಶಾನೆ ನಂ.ಡಿ–2ರ ದಾಖಲೆಯನ್ನು ಒಪ್ಪಿಕೊಂಡಿದ್ದು ಅದರಂತೆ ನಿಶಾನೆ ನಂ.ಡಿ–4 ರಿಂದ 6ನೇ ದವುಗಳ ಅಂಚೆ ಲಕೋಟೆಗಳು ಇಲಾಖೆಗೆ ಸಂಬಂಧಿಸಿದ್ದು ಅವುಗಳ ಮೇಲಿನ ರುಜುಗಳನ್ನು ಶ್ರೀ ಸುಕ್ತೆ ಇವರು ಒಪ್ಪಿಕೊಂಡಿದ್ದು ಆ ರುಜುಗಳು ಮತ್ತು ಜಗಳದಲ್ಲಿರುವ ನಿಶಾನೆ ನಂ.ಡಿ–1 ಮತ್ತು ಪಿ–3ರ ಮೇಲಿನ ಸುಕ್ತೆ ಇವರ ರುಜುಗಳು ಒಂದಕ್ಕೊಂದು ಹೋಲಿಕೆಯಾಗುತ್ತಿದ್ದು ಅವುಗಳನ್ನು ವಿಧಿ ವಿಜ್ಞಾನ ಪ್ರಯೋಗಾಲಯ, ಮಡಿವಾಳ, ಬೆಂಗಳೂರು ಇವರ ಪರೀವೀಕ್ಷಣೆಗೆ ಕಳುಹಿಸಿ ಅವರ ಅಭಿಪ್ರಾಯವನ್ನು ಪಡೆದುಕೊಂಡು ಮುಂದಿನ ಕ್ರಮ ಜರುಗಿಸುವುದು ಅವಶ್ಯಕವಾಗಿತ್ತು. ಇಲ್ಲದಿದ್ದರೆ ತಮಗೆ ತುಂಬಾ ಅನ್ಯಾಯ ಮತ್ತು ಭರಿಸಲಾರದ ನಷ್ಟವುಂಟಾಗುವುದು ಎಂದು ಪ್ರತಿಪಾದಿಸಿದ್ದಾರೆ. ನನ್ನ ಅಭಿಪ್ರಾಯದಲ್ಲಿ ಇಂತಹ ಕ್ರಮ ಜರುಗಿಸುವುದು ಅವಶ್ಯವಿದ್ದ ಪಕ್ಷದಲ್ಲಿ ಇದನ್ನು ಈ ಮುಂಚೆಯೇ ಅಂದರೆ ದಿನಾಂಕ: 11.05.2007 ರ ಪೂರ್ವದಲ್ಲಿ ಶಿಸ್ತು ಪ್ರಾಧಿಕಾರಕ್ಕೆ ವಿನಂತಿಸಿಕೊಂಡು ಇಂಥಹ ಕ್ರಮ ಜರುಗಿಸಿಕೊಳ್ಳಬೇಕಾಗಿತ್ತು. ಆದರೆ ವಿನಾ: ಕಾರಣ ಕಾಲ ವಿಳಂಬನೆ ಮಾಡಿ ನಿಗದಿತ ಅವಧಿಯಲ್ಲಿ ವಿಚಾರಣೆ ವರದಿಯನ್ನು ಸಲ್ಲಿಸಲು ತಡೆಹಿಡಿಯುವ ಅವರ ವ್ಯರ್ಥ ಪ್ರಯತ್ನಗಳಲ್ಲೂ ಇದೂ ಒಂದಾಗಿದೆಯೆಂದು ನನಗೆ ಕಂಡುಬರುತ್ತದೆ. ಇದಲ್ಲದೇ ಭಾರತೀಯ ಸಾಕ್ಷಿ ಅಧಿನಿಯಮ ಕಲಂ 45 ರಿಂದ 50 ಮೇರೆಗೆ ನ್ಯಾಯಾಲಯವಾಗಲೀ ಅಥವಾ ವಿಚಾರಣಾಧಿಕಾರಿಗಳಾಗಲೀ ಅವುಗಳೇ ಮುಖ್ಯ ಆಧಾರವೆಂದು ಪರಿಗಣಿಸಲು ಆಗುವುದಿಲ್ಲ. ಇಂಥಹ ತಜ್ಞರ ಅಭಿಪ್ರಾಯಗಳನ್ನು ಸಂದರ್ಭಕ್ಕೆ ತಕ್ಕಂತೆ ಇತರ ದಾಖಲೆಗಳನ್ನು ಪರಿಶೀಲಿಸಿ ಯೋಗ್ಯ ತೀರ್ಮಾನಕ್ಕೆ ಬರಬೇಕಾಗುತ್ತದೆ. ಇದರಲ್ಲಿ ನಾವು ಬರಿಗಣ್ಣಿನಿಂದ ವಿವಾದಿತ ಮತ್ತು ಒಪ್ಪಿಕೊಂಡಿರುವ ದಾಖಲೆಗಳು ಹಾಗೂ ಶ್ರೀ ಸುಕ್ತೆ ಇವರ ಸಾಕ್ಷಿ ಹೇಳಿಕೆ ಸಹಿಗಳನ್ನು ವಿವಾದಿತ ನಿಶಾನೆ ಡಿ–1 ಮತ್ತು ಪಿ–3 ನ್ನು ಕೂಲಂಕುಷವಾಗಿ ಪರಿಶೀಲಿಸಲಿಕ್ಕಾಗಿ ಅನೇಕ ವ್ಯತ್ಯಾಸಗಳು ಕಂಡುಬರುವುದು ವಿಧಿತವಾಗುತ್ತದೆ. ಇದಕ್ಕಿಂತಲೂ ಮಿಗಿಲಾಗಿ ದೋಷಾರೋಪಿತ ನೌಕರರು ಸುಳ್ಳು ಸಾಧಿಸುತ್ತಿದ್ದಾರೆ ಅನ್ನುವುದಕ್ಕೆ ನಿಶಾನೆ ಡಿ–1 ರ ಮೇಲಿನ ದಿನಾಂಕ:02.10.2006 ನ್ನು ಆ ದಿವಸ ಗಾಂಧಿಜಯಂತಿ ನಿಮಿತ್ತ ಸಾರ್ವಜನಿಕ ರಜೆ ಇದ್ದುದನ್ನು ದಿನಾಂಕ:03.10.2006 ಎಂದು ತಿದ್ದಲಾಗಿದೆ ಅನ್ನುವುದೂ ಸಹ ಬರಿಗಣ್ಣಿಗೆ ಕಂಡುಬರುತ್ತಿದ್ದು ಅದನ್ನೂ ಸಹ ಪಿಡಬ್ಲೂ–1 ಬಸನಗೌಡ ಹಾಗೂ ಪಿಡಬ್ಲೂ–4 ಸುಕ್ತೆ ಅವರು ಸರಿಯಾಗಿ ಹೇಳಿದ್ದಾರೆ. ಈ ವಿಷಯಕ್ಕೆ ಸಂಬಂಧಿಸಿದಂತೆ ದೋಷಾರೋಪಿತ ನೌಕರರು ಮತ್ತು ಅವರ ಪರ ಹಾಜರಾಗಿದ್ದ ಇಲಾಖಾ ರಕ್ಷಣಾ ಸಹಾಯಕರು ಸಹ ಕಣ್ಣುಮುಚ್ಚಿ ಕುಳಿತಿದ್ದಾರೆ. ಕಾರಣ ಇಷ್ಟೆ ಅದನ್ನು ಅವರು ಒಪ್ಪಿಕೊಳ್ಳದೆ ಬೇರೆ ದಾರಿ ಇರುವುದಿಲ್ಲ. ಹೀಗಾಗಿ ದೋಷಾರೋಪಿತ ಪರ ರಕ್ಷಣಾ ಹೇಳಿಕೆ ಅಥವಾ ಅವರ ಪ್ರತಿಪಾದನೆಯಲ್ಲಿ ಯಾವುದೇ ಹುರುಳು ಇರುವುದಿಲ್ಲ.

9) ಇನ್ನುಳಿದ ಸಾಕ್ಷಿದಾರರೆಂದರೆ ಪಿಡಬ್ಲೂ–2 ಶ್ರೀ ಚಂದ್ರಶೇಖರ ಚಿಕ್ಕಮಠ ಆಗಿನ ಸಹಾಯಕ ನಿರ್ದೇಶಕರು, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಹಾವೇರಿ ಇವರು ತಮ್ಮ ಸಾಕ್ಷಿಯಲ್ಲಿ ದಿನಾಂಕ:03.10.2006 ರಂದು ಅಪರಾಹ್ನ 1–30 ಅಥವಾ 2.00 ಗಂಟೆಗೆ ಪಿಡಬ್ಲೂ–5 ಶ್ರೀ ನೀಲಕಂಠ ಎಸ್. ನಾಗಶೆಟ್ಟಿ, ಜಿಲ್ಲಾ ಸಂಖ್ಯಾ

ಸಂಗ್ರಹಣಾಧಿಕಾರಿಗಳು, ಹಾವೇರಿ ಇವರ ಕಚೇರಿಯ ಕೊಠಡಿಯಲ್ಲಿದ್ದಾಗ ದೋಷಾರೋಪಿತ ನೌಕರರು ಹಾಜರಾಗಿ ತಾವು ಮಾಹಿತಿ ಹಕ್ಕು ಅಧಿನಿಯಮ 2005 ರಡಿ ಒಂದು ಮಾಹಿತಿ ಕೋರಿ ಅರ್ಜಿ ಸಲ್ಲಿಸಲು ಬಂದಿದ್ದೇನೆ ಎಂದು ಹೇಳಿದ್ದಕ್ಕೆ ಪಿಡಬ್ಲೂ–5 ಶ್ರೀ ನೀಲಕಂಠ ಎಸ್. ನಾಗಶೆಟ್ಟಿ ಇವರು ತಾವು ಕಚೇರಿಯ ಮೇಲಧಿಕಾರಿಯಾಗಿದ್ದು ನೀವು ಅಮಾನತ್ತುರಲ್ಲಿ ಇದ್ದುದರಿಂದ ನಿಮ್ಮ ಕೇಂದ್ರಸ್ಥಾನವನ್ನು ಬಿಡಲು ನನ್ನ ಪೂರ್ವಾನುಮತಿ ಪಡೆಯುವುದು ಅವಶ್ಯವಿತ್ತು. ಮತ್ತು ಒಂದು ವೇಳೆ ನೀವು ನಿಮ್ಮ ಅರ್ಜಿಯನ್ನು ನಿವಾಸದ ವಿಳಾಸ ಅಥವಾ ಆ ವೇಳೆಗೆ ಸೇವೆಯಲ್ಲಿದ್ದ ಹಾನಗಲ್ ತಹಶೀಲ್ದಾರರ ಮುಖಾಂತರ ಕಳುಹಿಸಿದ್ದರೆ ಪರಿಶೀಲನೆ ಮಾಡಲು ಅನುಕೂಲವಾಗುತ್ತಿತ್ತು ಅಂಥ ಹೇಳಿದ್ದಕ್ಕೆ ಅವರು ಏನೇ ಆದರೂ ನಾನು ಇವತ್ತಿನ ದಿವಸ ಬಂದಿದ್ದು ಅರ್ಜಿ ಸಲ್ಲಿಸಿಯೇ ಹೋಗುತ್ತೇನೆಂದು ಹೊರಗೆ ಹೋದರೆಂದು ಹೇಳುತ್ತಾರೆ. ಇವರ ಪಾಟೀ ಸವಾಲಿನಲ್ಲಿ ದೋಷಾರೋಪಿತ ನೌಕರರು ತಾವು ಆ ದಿವಸ ಹಾವೇರಿ ಕಚೇರಿಗೆ ಹೋದದ್ದು ನಿಜ ಆದರೆ ಕೊಠಡಿಯಲ್ಲಿ ಹೋಗಿಲ್ಲ ಅನ್ನುವುದನ್ನು ಸಾಕ್ಷಿದಾರರು ಸ್ಪಷ್ಟವಾಗಿ ಅಲ್ಲಗಳೆದಿದ್ದಾರೆ. ಇವರ ಹೇಳಿಕೆಯನ್ನು ಪುಷ್ಟೀಕರಿಸಲು ಪಿಡಬ್ಲೂ–3 ಶ್ರೀ ತೇಲ್ಕರ ಹಾಗೂ ಪಿಡಬ್ಲೂ–5 ಶ್ರೀ ನೀಲಕಂಠ ಎಸ್. ನಾಗಶೆಟ್ಟಿ, ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ಇವರು ಅನುಮೋದಿಸಿದ್ದಾರೆ. ಆದ್ದರಿಂದ ಇವರ ಹೇಳಿಕೆಗಳಿಗೆ ಬೆಲೆಯಿದ್ದು ದೋಷಾರೋಪಿತ ನೌಕರನು ಸಂರಕ್ಷಣೆಯಲ್ಲಿ ಸುಳ್ಳು ಪ್ರತಿಪಾದನೆಯನ್ನು ಮಾಡುವುದು ಬಿಟ್ಟರೆ ಬೇರೆ ಹುರುಳಿಲ್ಲ ಅನ್ನುವುದು ಕಂಡುಬರುತ್ತದೆ.

10) ದಿನಾಂಕ:03.10.2006 ರಂದು ದೋಷಾರೋಪಿತ ನೌಕರರು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳ ಕಚೇರಿ, ಹಾವೇರಿ ಇವರ ಕಚೇರಿಗೆ ಹಾಜರಾದಾಗ್ಯೂ, ಯಾವುದೇ ಮಾಹಿತಿ ಕೋರಿ ಅರ್ಜಿ ಸಲ್ಲಿಸದೇ ತಾವೇ ಕೃತಕವಾಗಿ ಮತ್ತು ಖೊಟ್ಟಿಯಾಗಿ ಸೃಷ್ಟಿಸಿದ ಅರ್ಜಿ ಮತ್ತು ಅದರ ಮೇಲೆ ಗಡಿಬಿಡಿಯಲ್ಲಿ ಸ್ವೀಕೃತಿ ದುಂಡನೆಯ ಮೊಹರದ ಬದಲಾಗಿ ರವಾನೆಯ ಉದ್ದನೆಯ ಮೊಹರನ್ನು ಹಾಕಿಕೊಂಡಿರುವುದು ಸಹ ಮೇಲ್ನೋಟಕ್ಕೆ ಕಂಡುಬರುತ್ತಿದೆ. ಒಂದು ವೇಳೆ ನಿಜವಾಗಿ ಪಿಡಬ್ಲೂ–4 ಶ್ರೀ ಸುಕ್ತೆ ವಿಷಯ ನಿರ್ವಾಹಕರೇ ಇಂಥಹ ಅರ್ಜಿಯನ್ನು ಸ್ವೀಕರಿಸಿದ್ದಾಗಿದ್ದರೆ ಅವರು ಉದ್ದನೆಯ ರವಾನೆಯ ಮೊಹರು ಹೊರತಾಗಿ ನ್ಯಾಯವಾಗಿ ದುಂಡನೆಯ ಸ್ವೀಕೃತಿ ಮೊಹರನ್ನೇ ಹಾಕುತ್ತಿದ್ದರು. ಅದಕ್ಕೆ ಕಾನೂನಿನಲ್ಲಿ ಹೇಳಿಕೆ ಇರುವುದೇನೆಂದರೆ, <u>ಸಾಮಾನ್ಯವಾಗಿ ಎಲ್ಲಾ ಅಪರಾಧಿಗಳು ಅಪರಾಧದ ಒಂದಿಲ್ಲ ಒಂದು ಸುಳುವುಗಳನ್ನು ಮತ್ತು ಕುರುಹುಗಳನ್ನು ಬಿಟ್ಟುಹೋಗುತ್ತಾರೆ. ಆದ್ದರಿಂದಲೇ ಇಂಥಹ ಅಪರಾಧಿಗಳನ್ನು ಕಂಡುಹಿಡಿಯಲು ಕಾನೂನಿನ ಕೈಗಳು ಸಾಕಷ್ಟು ಬಲವಾಗಿವೆ ಮತ್ತು ಉದ್ದವಾಗಿವೆ.</u> ಪಿಡಬ್ಲೂ–3 ಪ್ರಥಮ ದರ್ಜೆ ಗುಮಾಸ್ತ ಹಾಗೂ ಪಿಡಬ್ಲೂ–4 ವಿಷಯ ನಿರ್ವಾಹಕ ಮತ್ತು ಪಿಡಬ್ಲೂ–5 ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು ನಿಸ್ಸಂದೇಹವಾಗಿ ದೋಷಾರೋಪಿತ ನೌಕರರಿಂದ ದಿನಾಂಕ:03.10.2006 ರಂದು ಯಾವುದೇ ಅಧಿಕೃತ ದಾಖಲೆ ತಮ್ಮ ಕಚೇರಿಗೆ ಬಂದಿರುವುದಿಲ್ಲವೆಂದು ಹೇಳುತ್ತಾರೆ. ಅಂಥಹ ಇವರ ಹೇಳಿಕೆಗಳಲ್ಲಿ ಸತ್ಯಾಂಶವಿರುವುದು ಬೆಳಕಿಗೆ ಬರುತ್ತದೆ. ಅದರಂತೆ ನಿಶಾನೆ ನಂ.ಪಿ–4 ರ ದಿನಾಂಕ 14/18–11–2006 ರ ದಾಖಲೆಯನ್ನು ಪಿಡಬ್ಲೂ–5 ಇವರು ಹಾಗೂ ದೋಷಾರೋಪಿತ ನೌಕರರು ಒಪ್ಪಿಕೊಂಡಿದ್ದಾರೆ. ಇದರ ಮೇಲಿನ ದಿನಾಂಕ 14 ಇದನ್ನು ಪುನ: ತಿದ್ದುಪಡಿ ಮಾಡಿ 18 ರ ಹಾಗೆ ತೋರಿಸುವುದು ದೋಷಾರೋಪಿತ ನೌಕರರ ಹವ್ಯಾಸಬಲ ಮತ್ತು ಅಭ್ಯಾಸಬಲವೆಂದು ವ್ಯಕ್ತವಾಗುತ್ತದೆ. ಈ ಎಲ್ಲಾ ಕಾರಣಗಳ ಸಲುವಾಗಿ ಅವರ ಸಂರಕ್ಷಣಾ ಹೇಳಿಕೆ, ಸಾಕ್ಷಿದಾರರ ಪಾಟೀ ಸವಾಲು ಮತ್ತು ಅವರು ಸಲ್ಲಿಸಿರುವ ಲಿಖಿತ ಪ್ರತಿವಾದ ಪತ್ರದಲ್ಲಿ ಯಾವುದೇ ಅರ್ಥವಿಲ್ಲ ಎನ್ನುವುದು ಕಂಡುಬರುತ್ತದೆ.

11) ದೋಷಾರೋಪಿತ ಸರಕಾರಿ ನೌಕರರ ಲಿಖಿತ ಸಂರಕ್ಷಣಾ ಹೇಳಿಕೆ, ಸಾಕ್ಷಿದಾರರ ಪಾಟೀ ಸವಾಲುಗಳು ಮತ್ತು ಲಿಖಿತ ಪ್ರತಿವಾದ ಪತ್ರ ಇವುಗಳನ್ನು ಗಣನೆಗೆ ತೆಗೆದುಕೊಂಡಾಗ ನಮಗೆ ಕಂಡುಬರುವುದೇನೆಂದರೆ, ದೋಷಾರೋಪಿತ ನೌಕರರು ತಮ್ಮ ಮೇಲಧಿಕಾರಿಗಳ ಮೇಲೆ ಯಾವುದೇ ಅರ್ಥವಿಲ್ಲದ ಆರೋಪಣೆಗಳನ್ನು ಮಾಡುವುದು ಹಾಗೂ ಅವರಿಗೆ ಅಸಹನೀಯ ಮನೋವೇದನೆ ಮತ್ತು ಆಧಾರರಹಿತ ಊಹಾಪೋಹಗಳ ಮೇರೆಗೆ ಕಣ್ಣುಮುಚ್ಚಿಕೊಂಡು ವಿನಾ:ಕಾರಣ ಕಚೇರಿಯ ಶಾಂತಿ ಮತ್ತು ನೆಮ್ಮದಿಯನ್ನು ಕದಡಿ ಅಪ್ರಮಾಣಿಕವಾಗಿ ನಡೆದುಕೊಂಡು ಅಪರಾಧಿಕ ಮನೋಭಾವನೆ ಉಳ್ಳವರು ಎನ್ನುವುದು ಸಹ ಕಂಡುಬರುತ್ತದೆ. ಈ ಸಂಗತಿಯನ್ನು ಪುಷ್ಠೀಕರಿಸಲು ಮಂಡನಾಧಿಕಾರಿಗಳು ತಮ್ಮ ಲಿಖಿತವಾದ ಪತ್ರದ ಜೊತೆಯಲ್ಲಿ ಇಂಥಹದೇ ಕಚೇರಿಯ ಸಾರ್ವಜನಿಕ ಹಣವನ್ನು ದುರ್ಬಳಕೆ ಮಾಡಿಕೊಂಡು ಇಲಾಖಾ ವಿಚಾರಣೆಗೆ ಗುರಿಯಾಗಿ ಶಿಕ್ಷೆಯನ್ನು ಸಹ ಅನುಭವಿಸುತ್ತಿರುವುದು ಕಂಡುಬಂದಿದೆ. ಒಂದು ವೇಳೆ ದೋಷಾರೋಪಿತ ನೌಕರರು ನ್ಯಾಯವಂತರು ಮತ್ತು ಸರಕಾರೀ ಸೇವೆಯೇ ಜನಾರ್ಧನ ಸೇವೆಯೆಂದು ಕಾರ್ಯನಿರ್ವಹಿಸುವವರಾಗಿದ್ದರೆ ಇಂಥಹ ಆಜ್ಞೆಯನ್ನು ಮೇಲ್ಮನವಿ ಮೂಲಕ ಕಾನೂನು ಕ್ರಮ ಜರುಗಿಸಬಹುದಿತ್ತು. ಅದಕ್ಕೆ ಅವರು ಏಕೆ ತಟಸ್ಥ ಧೋರಣೆಯನ್ನು ತಳೆದಿದ್ದಾರೆ ಅನ್ನುವುದಕ್ಕೆ ಯಾವುದೇ ವಿವರಣೆ ಅವರಿಂದ ಬಂದಿರುವುದಿಲ್ಲ. ಅವರಿಗೆ ನಿಯಮಾವಳಿಗಳು ಮತ್ತು ನೈಸರ್ಗಿಕ ನಿಯಮಗಳ ಪಾಲನೆ ಮೇರೆಗೆ ವಿಚಾರಣಾಧಿಕಾರಿಗಳು ಒಪ್ಪಿಕೊಳ್ಳುವಂಥಹ ತಮ್ಮ ಬಾಯಿ ಮಾತಿನ ಹೇಳಿಕೆಯನ್ನು ಅಥವಾ ಅಧಿಕೃತ ಒಪ್ಪಬಹುದಾದಂಥಹ ದಾಖಲೆಗಳನ್ನು ಪೂರೈಸಲು ವಿಫಲವಾಗಿದ್ದಾರೆ, ಆದರೆ ಸಫಲರಾಗಿರುವುದಿಲ್ಲ.

12) ಕಾರಣ ಶಿಸ್ತು ಪ್ರಾಧಿಕಾರದ ಪರವಾಗಿ ಮಂಡನಾಧಿಕಾರಿಗಳು ಹಾಜರುಪಡಿಸಿದ ಸಾಕ್ಷಿ ಪುರಾವೆಗಳನ್ನು ಪರಿಶೀಲನೆ ಮಾಡಿ ದೋಷಾರೋಪಿತ ನೌಕರನ ಲಿಖಿತ ಸಂರಕ್ಷಣಾ ಹೇಳಿಕೆ, ಸಾಕ್ಷಿದಾರರ ಪಾಟೀ ಸವಾಲು ಮತ್ತು ಅವರ ಲಿಖಿತ ಪ್ರತಿವಾದ ಪತ್ರ ಇವುಗಳನ್ನು ಒಂದಕ್ಕೊಂದು ಹೋಲಿಸಿ **"ನ್ಯಾಯದಾನದ ತಕ್ಕಡಿಯಲ್ಲಿ ತೂಗಿದಾಗ ಮಂಡನಾಧಿಕಾರಿಗಳು ಹಾಜರುಪಡಿಸಿದ ಸಾಕ್ಷಿ ಪುರಾವೆಗಳಲ್ಲಿ ಸತ್ಯದ ನೆರಳಿದೆ ಮತ್ತು ನ್ಯಾಯದಾನದ ತಕ್ಕಡಿ ಅವರ ಪರವಾಗಿ ತೂಗುತ್ತದೆ"**. ಆದ್ದರಿಂದ ದೋಷಾರೋಪಿತ ಸರಕಾರಿ ನೌಕರನ ಯಾವುದೇ ಹೇಳಿಕೆಯಲ್ಲಿ ಯಾವುದೇ ಸತ್ಯಾಂಶಗಳು ಕಂಡುಬರುವುದಿಲ್ಲ. ಮಂಡನಾಧಿಕಾರಿಗಳು ಹಾಗೂ ಶಿಸ್ತು ಪ್ರಾಧಿಕಾರಿಗಳು ದೋಷಾರೋಪಿತ ಸರಕಾರಿ ನೌಕರರು ಸಲ್ಲಿಸಿದ ದಿನಾಂಕ:13.10.2008 ರ ಆಧಾರವಿಲ್ಲದ, ಅರ್ಥವಿಲ್ಲದ, ಊಹಾಪೋಹಗಳ ಮೇಲೆ ಆಧಾರಿತ ಸುಳ್ಳು ದೂರುಗಳನ್ನು ಮಾಡುತ್ತಾ ಸತ್ಯಕ್ಕೆ ದೂರವಾಗಿದ್ದು ಅದೂ ಸಹ ಒಂದು ಸರ್ಕಾರಿ ನೌಕರರಿಗೆ ಸಲ್ಲದ ದುರ್ನಡತೆಯಾಗಿದ್ದು ಅದನ್ನು ಶಿಸ್ತು ಪ್ರಾಧಿಕಾರಿಗಳು ಒಳ್ಳೆಯ ಒಪ್ಪಬಹುದಾದ ಸಕಾರಣಗಳೊಂದಿಗೆ ದಿನಾಂಕ:17.10.2008 ರಂದು ತಿರಸ್ಕಾರ ಮಾಡಿದ್ದಾರೆ. ಇದೇ ಸಂಗತಿಯನ್ನು ಆಧಾರವಿಟ್ಟುಕೊಂಡು ದೋಷಾರೋಪಿತರ ಕ.ನಾ.ಸೇ.(ವ.ನಿ.ಮೇ) 1957ರ ನಿಯಮ: 11 ಮತ್ತು ಉಪನಿಯಮ: 18ರ ಅಡಿ ಈ ವಿಷಯಕ್ಕೆ ಸಂಬಂಧಿಸಿದಂತೆ ಪ್ರಶ್ನೆ ನಂ.34 ಇದನ್ನು ಪ್ರಶ್ನಿಸಿದಾಗ **ತಮ್ಮ ಮಾನಸಿಕ ಸಂಶಯದ ಹೊರತಾಗಿ ಬೇರೆ ಯಾವುದೇ ಸಾಕ್ಷಿ ಪುರಾವೆಗಳು** ಇರುವುದಿಲ್ಲವೆಂದು ಉತ್ತರಿಸಿರುವುದನ್ನು ನೋಡಿದರೆ ಅವರ ಅಸಂಬದ್ಧ ದೂರುಗಳಲ್ಲಿ ಯಾವುದೇ ಹುರುಳು ಇರುವುದಿಲ್ಲ ಮತ್ತು ನನ್ನ ಅಭಿಪ್ರಾಯದಲ್ಲಿ ಇದೊಂದು ನಿಷ್ಪಕ್ಷಪಾತವಾದ ವಿಚಾರಣೆ ಇದ್ದು ಸತ್ಯವನ್ನು ಶೋಧನೆ ಮಾಡುವುದೇ ಈ ವಿಚಾರಣೆಯ ಮೂಲ ಗುರಿ ಮತ್ತು ಆದ್ಯ ಕರ್ತವ್ಯವಾಗಿರುತ್ತದೆ. ನನ್ನ ಅಭಿಪ್ರಾಯದಲ್ಲಿ ನಿಯಮಗಳ ಪ್ರಕಾರ ಹೊರಗಿನಿಂದ ಬರುವ ಸರಕಾರಿ ನೌಕರರಾದ ಪಿಡಬ್ಲೂ–1 ಮತ್ತು 4 ಇವರಿಗೆ ಮಾತ್ರ ನಿಯಮಗಳ ಪ್ರಕಾರ ಒಂದು ವೇಳೆ ದೋಷಾರೋಪಿತ ನೌಕರರ ತಪ್ಪಿನಿಂದಲೇ ಅವರಿಗೆ ಪಾಟೀ ಸವಾಲು ಮಾಡಲು ಅನುಕೂಲ ಮಾಡಿಕೊಡಬೇಕಾದರೆ ದಿನನಿತ್ಯದಭತ್ಯೆ ಮತ್ತು ಪ್ರವಾಸಭತ್ಯೆಯನ್ನು ಅವರೇ ಭರಿಸಬೇಕಾಗುತ್ತದೆ ಅನ್ನುವ ನಿಯಮವಿದೆ. ಇದು ಅಸಂಬದ್ಧ ತಾನೇಕೆ ಭರಿಸಬೇಕು ಎಂದು ಹೇಳುವ ಪ್ರಶ್ನೆಗಳಿಗೆ ಅರ್ಥವೇ ಇರುವುದಿಲ್ಲ. ದುರ್ದೈವದಿಂದ ಇಲ್ಲಿಯವರೆಗೂ ಅವರ ದಿನಭತ್ಯೆ ಮತ್ತು ಪ್ರವಾಸಭತ್ಯೆಯನ್ನು ಕೊಟ್ಟಿರುವುದಿಲ್ಲ. ಕಾರಣ ಎಂದರೆ ಅವರು ತಿಂಗಳ ಸಂಬಳವನ್ನು ಇಲ್ಲಿಯವರೆಗೆ ಪಡೆದಿಲ್ಲ ಎಂದು ಹೇಳುತ್ತಾರೆ. ಸಾಮಾನ್ಯವಾಗಿ ದೋಷಾರೋಪಿತ ನೌಕರರು ತಮಗೆ ಇಲಾಖಾ ಸಹಾಯಕರು ಬೇಕೆಂದು ಕೇಳಿಕೊಂಡಾಗ ಅವರಿಗೆ ಸಲ್ಲಿಸಬೇಕಾದ ಸಂಭಾವನೆ ಬಗ್ಗೆ ವಿಚಾರಿಸಿದಾಗ ದೋಷಾರೋಪಿತ ನೌಕರರು ತಮ್ಮ ಆರ್ಥಿಕ ಸ್ಥಿತಿ ಚೆನ್ನಾಗಿದ್ದು ಅದನ್ನು ತಾವು ನೋಡಿಕೊಳ್ಳುವುದಾಗಿ ಹೇಳುತ್ತಾರೆ. ಆದರೆ ಸರಕಾರಿ ನೌಕರರ ಭತ್ಯೆಯನ್ನು ಕೊಡಲು ಕೇಳಿದಾಗ ಕುಂಟುನೆಪ ಹೇಳಿ ನುಣುಚಿಕೊಳ್ಳಲು ಪ್ರಯತ್ನಿಸುತ್ತಾರೆ. ಅದರಂತೆ, ಪಿಡಬ್ಲೂ–5 ಶ್ರೀ ನೀಲಕಂಠ ನಾಗಶೆಟ್ಟಿ ಇವರಿಗೆ ಈ ಇಲಾಖೆಯ ವಿಚಾರಣೆಯ ಸೂತ್ರಧಾರಿ ಮತ್ತು ಅವರ ಕಚೇರಿಯಲ್ಲಿ ವಿಚಾರಣೆ ನಡೆಸುವುದು ಸರಿಯಲ್ಲ ಎಂದು ಹೇಳುವುದು ಅಸತ್ಯವಾಗಿದ್ದು ಸತ್ಯದಿಂದ ದೂರವಾಗಿದೆ. ನಾನು ಒಬ್ಬ ನಿವೃತ್ತ ಜಿಲ್ಲಾ ನ್ಯಾಯಾಧೀಶನೆಂದು ನಿಯಮಗಳಡಿಯಲ್ಲಿ ಅವರಿಗೆ ಸಲ್ಲಬೇಕಾದ ಎಲ್ಲ ಅನುಕೂಲತೆಗಳನ್ನು ಮಾಡಿಕೊಟ್ಟಿದ್ದು ಅವುಗಳನ್ನು ಒಪ್ಪಿಕೊಂಡು ದಿನನಿತ್ಯದ ನಡವಳಿಕೆಗಳಿಗೆ ಸಹಿ ಮಾಡಿರುವುದು ಸತ್ಯಸಂಗತಿ. ಹೀಗಾಗಿ ನನ್ನ ಅಭಿಪ್ರಾಯದಲ್ಲಿ ದೋಷಾರೋಪಿತ ಸರಕಾರಿ ನೌಕರರ ಅಸಹಕಾರ, ಅಸಂಬದ್ಧ ಪ್ರಶ್ನೆಗಳು ಅವರೇ ತಲೆಯಲ್ಲಿ ತುಂಬಿಕೊಂಡಿರುವ ದುಷ್ಟ ವಿಚಾರಗಳು ಇಂತಹ ದುಸ್ಸಾಹಸಕ್ಕೆ ಪ್ರಯತ್ನಿಸಿರುವ ಕಹಿ ಸಂಗತಿಗಳಾಗಿವೆ. ಅವರ ತಪ್ಪಿನಿಂದಲೇ ಸುಮಾರು ಒಂದು ವಾರದವರೆಗೆ ವರದಿಯನ್ನು ಅವಧಿಯೊಳಗೆ ಸಲ್ಲಿಸಲು ಅನಾನುಕೂಲತೆ ಆಗಿದ್ದಕ್ಕೆ ನಾನು ವಿಷಧಿಸುವ ಪ್ರಸಂಗ ಉಂಟಾಗಿದೆ. ಏನೇ ಆದರೂ ಇಲಾಖಾ ಮುಖ್ಯಸ್ಥರು ವರದಿ ಬಂದನಂತರ ಬೇರೆ ನಿಯಮಗಳ ಪ್ರಕಾರ ಕ್ರಮವನ್ನು ಜರುಗಿಸುವ ವಿಚಾರವು ಸ್ವಾಗತಾರ್ಹವಾಗಿದೆ. ಅದು ಇಲಾಖೆ ಮತ್ತು ಸರಕಾರಿ ನೌಕರರಿಗೆ ಸಂಬಂಧಪಟ್ಟ ವಿಷಯವಾಗಿದೆ.

13) ಕಾರಣ ಈ ಇಲಾಖಾ ವಿಚಾರಣೆ ಪ್ರಕರಣದಲ್ಲಿ ವಿಧಿತವಾಗಿರುವ ಸಾಕ್ಷಿ ಪುರಾವೆಗಳು ನಿಚ್ಚಳವಾಗಿ ಮತ್ತು ನಿಸ್ಸಂದೇಹವಾಗಿ ದೋಷಾರೋಪಿತ ಸರಕಾರಿ ನೌಕರರು ಒಬ್ಬ ದೋಷಪೂರಿತ ನೌಕರನಾಗಿದ್ದು, ಸರಕಾರಿ ನೌಕರರಿಗೆ ಸಲ್ಲದವರಾಗಿ ಸೇವೆ ಸಲ್ಲಿಸುತ್ತಿದ್ದು ಅವರ ಗಂಭೀರ ಸ್ವರೂಪದ ಅಪರಾಧಿ ಮನೋಭಾವನೆ ನಿರ್ಲಕ್ಷ ಹಾಗೂ ನಿಷ್ಕಾಳಜಿತನ ಮತ್ತು ದುರ್ನಡತೆಗಳುಳ್ಳವರು ಎನ್ನುವುದನ್ನು ತೋರುಬೆರಳು ಮಾಡಿ ತೋರಿಸಿದ್ದಾಗಿದೆ ಮತ್ತು ಅವುಗಳನ್ನು ರುಜುವಾತುಪಡಿಸಲು ಮಂಡನಾಧಿಕಾರಿಗಳೂ ಸಹ ಶಕ್ಯರಾಗಿದ್ದಾರೆ. ಹೀಗೆ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966 ರ ನಿಯಮ: 3 ತ್ತು 2(2ಎ) ರ ಸ್ಪಷ್ಟ ಉಲ್ಲಂಘನೆಯಾಗಿದೆ. ದೋಷಾರೋಪಿತ ಸರಕಾರಿ ನೌಕರರು ದಿನಾಂಕ:03.10.2006 ರ ಅರ್ಜಿಯ ಮೇಲೆ ದಿನಾಂಕ:18.11.2006 ರಂದು ಕರ್ನಾಟಕ ಮಾಹಿತಿ ಆಯೋಗಕ್ಕೆ ನೇರವಾಗಿ, ಅವಶ್ಯವಿದ್ದ ಮೇಲಧಿಕಾರಿಗಳಿಗೆ ಇಲಾಖೆ ವತಿಯಿಂದ ಮನವಿ ಅಥವಾ ಮೇಲ್ಮನವಿ ಸಲ್ಲಿಸದೇ ನೇರವಾಗಿ ಮಾಹಿತಿ ಆಯೋಗಕ್ಕೆ ಮೇಲ್ಮನವಿ ಮಾಡಿಕೊಂಡು ತಪ್ಪು ಮಾಡಿದ್ದಾರೆ. ಈ ಸಂಗತಿಯನ್ನು ಅವರು ಈ ವಿಚಾರಣೆಯಲ್ಲಿ ಒಪ್ಪಿಕೊಂಡಿದ್ದಾರೆ. ಅದಕ್ಕೆ ಅವರಿಂದ ಯಾವುದೇ ಸ್ಪಷ್ಟವಾದ ವಿವರಣೆಯೇ ಬಂದಿಲ್ಲ.

ಹೀಗಾಗಿ ಈ ದೋಷಾರೋಪಣೆಯೂ ಸಹ ಅವರ ಮೇಲೆ ರುಜುವಾತಾಗಿದೆ. ಅದೂ ಅಲ್ಲದೇ ಮಾನ್ಯ ಮುಖ್ಯ ಆಯುಕ್ತರು, ಮಾಹಿತಿ ಹಕ್ಕು ಆಯೋಗ, ಬೆಂಗಳೂರು ಇವರೂ ಸಹಿತ ತಮ್ಮ ಆದೇಶದಲ್ಲಿ ದೋಷಾರೋಪಿತ ಸರಕಾರಿ ನೌಕರರ ಮೇಲೆ ಇಲಾಖೆಯ ವತಿಯಿಂದ ಶಿಸ್ತು ಕ್ರಮ ಜರುಗಿಸಬೇಕು ಅನ್ನುವುದರಲ್ಲಿ ಯಾವುದೇ ಸಂದೇಹವು ಕಂಡುಬರುವುದಿಲ್ಲ. ಆದ್ದರಿಂದ ನನ್ನ ಅಭಿಪ್ರಾಯದಲ್ಲಿ ಶಿಸ್ತು ಪ್ರಾಧಿಕಾರಿಯವರು ದೋಷಾರೋಪಿತ ಸರಕಾರಿ ನೌಕರರ ಮೇಲೆ ಅನುಬಂಧ–1 ಮತ್ತು 2 ರಲ್ಲಿ ನಮೂದಿಸಿದ ದೋಷಾರೋಪಣೆಗಳು ಸುಸ್ಪಷ್ಟವಾಗಿ ಮತ್ತು ನಿಸ್ಸಂದೇಹವಾಗಿ ರುಜುವಾತು ಆಗಿವೆ ಎಂಬ ಅಭಿಪ್ರಾಯ ಮತ್ತು ತೀರ್ಮಾನಕ್ಕೆ ಬಂದು ಈ ಮೇಲಿನ ಅಂಶವನ್ನು ನಾನು ಸಕಾರಾತ್ಮಕವಾಗಿ ಉತ್ತರಿಸುತ್ತಾ ಈ ಕೆಳಕಂಡ ಸೂಕ್ತ ಆದೇಶವನ್ನು ಮಾಡುತ್ತೇನೆ.

**ಆದೇಶ**

ಇದರಲ್ಲಿ ಶಿಸ್ತು ಪ್ರಾಧಿಕಾರಿಗಳವರ ಅನುಬಂಧ–1 ಮತ್ತು 2 ರಲ್ಲಿ ನಮೂದಿಸಿದ ಎಲ್ಲ ದೋಷಾರೋಪಣೆಗಳು, ದೋಷಾರೋಪಿತ ಸರಕಾರಿ ನೌಕರರ ಮೇಲೆ ರುಜುವಾತು ಆಗಿದ್ದು, ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮಾವಳಿಗಳ ಪ್ರಕಾರ ಮುಂದಿನ ಯೋಗ್ಯ ಮತ್ತು ಸರಿಕಂಡ ಕ್ರಮ ಕೈಗೊಳ್ಳಬೇಕೆಂದು ವರದಿಯನ್ನು ಸಲ್ಲಿಸಲಾಗಿದೆ.

(ಈ ಮೇಲಿನ ವರದಿಯನ್ನು ನಾನೇ ಸಮಕ್ಷಮ ಈ ಇಲಾಖೆಯ ಅಧೀಕ್ಷಕರು ಹಾಗೂ ಬೆರಳಚ್ಚುಗಾರರಾದ ಶ್ರೀ ಗಂಗಾಧರ ಎಮ್ಮಿಗನೂರ ಇವರಿಗೆ ಕನ್ನಡ ಬೆರಳಚ್ಚುಯಂತ್ರ ಮೇಲೆ ಬೆರಳಚ್ಚುಪಡಿಸಿ ಓದಿನೋಡಿ ತಿದ್ದುಪಡಿ ಮಾಡಿ ವರದಿ ಸಲ್ಲಿಸಲಾಗಿದೆಯೆಂದು ಈ ಮೂಲಕ ದೃಢೀಕರಿಸಲಾಗಿದೆ)

ಧಾರವಾಡ, ಸಹಿ/–
ದಿನಾಂಕ:03.11.2008 (ಫ.ನಿ. ಗುಡ್ಡಾಕಾರ)
ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ
ಸರಕಾರಿ ವಿಚಾರಣಾಧಿಕಾರಿಗಳು.

---

ಅಂತಿಮವಾಗಿ, ಸದರಿ ಆಪಾದಿತ ಸರ್ಕಾರಿ ನೌಕರನಾದ ಶ್ರೀ ಆರ್.ಎಂ. ಕುಲಕರ್ಣಿ, (ಹಿಂದಿನ ಸಾಂಖ್ಯಿಕ ನಿರೀಕ್ಷಕರು, ತಾಲ್ಲೂಕು ಕಚೇರಿ, ಹಾನಗಲ್) ಅಮಾನತ್ತಿನಲ್ಲಿದ್ದ ಸದರಿ ಅವರು ಸೇವೆಗೆ ಪುನರ್‌ಸ್ಥಾಪನೆಗೊಂಡು ಪ್ರಸ್ತುತ ತಾಲ್ಲೂಕು ಕಚೇರಿ, ಸಿಂಧನೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವವರು ಇವರ ವಿರುದ್ಧದ ಇಲಾಖಾ ವಿಚಾರಣಾ ವರದಿಯನ್ನು ಸಂಪೂರ್ಣವಾಗಿ ಪರಿಶೀಲಿಸಲಾಗಿ, ಅವರ ವಿರುದ್ಧದ ಆರೋಪಗಳು ರುಜುವಾತಾಗಿರುತ್ತವೆ.

ಒಟ್ಟಾರೆ, ಈ ಇಲಾಖಾ ವಿಚಾರಣೆ ಪ್ರಕರಣದಲ್ಲಿ ಸದರಿ ಸರ್ಕಾರಿ ನೌಕರನಾದ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ಸರ್ಕಾರಿ ನೌಕರರೊಬ್ಬನಿಗೆ ಸಲ್ಲದ ರೀತಿಯಲ್ಲಿ ವರ್ತಿಸಿದ್ದು, ಅವರ ಗಂಭೀರ ಸ್ವರೂಪದ ಅಪರಾಧಿ ಮನೋಭಾವನೆ, ನಿರ್ಲಕ್ಷತನ ಹಾಗೂ ನಿಷ್ಕಾಳಜಿ ಧೋರಣೆ ಮತ್ತು ಹಾಗೂ ಆತನ ಮೇಲಧಿಕಾರಿಗಳ ವಿರುದ್ಧ ನಿರಂತರವಾಗಿ ಸಮರವನ್ನು ಸಾರುವಂತಹ ಅತ್ಯಂತ ದುರ್ನಡತೆಗಳುಳ್ಳವರು ಎನ್ನುವುದು ಸ್ಪಷ್ಟವಾಗಿ ಕಂಡು ಬರುತ್ತದೆಯಾದ್ದರಿಂದ ಆತನು ಕರ್ನಾಟಕ ನಾಗರಿಕ ಸೇವಾ (ನಡತೆ) ನಿಯಮಗಳು, 1966 ರ ನಿಯಮ: 2 ಮತ್ತು 3 ನ್ನು ಸ್ಪಷ್ಟವಾಗಿ ಉಲ್ಲಂಘಿಸಿರುತ್ತಾರೆ.

ಆದ್ದರಿಂದ, ಸದರಿ ಆರೋಪಿತ ಸರ್ಕಾರಿ ನೌಕರನಾದ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು ಇವರ ಮೇಲಿನ ಆಪಾದನೆಗಳ ಸ್ವರೂಪ ಮತ್ತು ಗಂಭೀರತೆಯನ್ನು ಪರಿಗಣಿಸಿ, ಹಾಗೂ ಅವರ ಮೇಲಿನ ಆಪಾದನೆಗಳು ನಿಸ್ಸಂದೇಹವಾಗಿ ರುಜುವಾತಾಗಿದ್ದರಿಂದ, ಅವರಿಗೆ ಈ ಕೆಳಗೆ ತಿಳಿಸಲಾದ ದಂಡನೆ ವಿಧಿಸುವುದು ಸೂಕ್ತವೆಂದು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಕಚೇರಿ ಆದೇಶ ಸಂಖ್ಯೆ: ಆಡಳಿತ/260/2009–10**

ಪ್ರಸ್ತಾವನೆಯಲ್ಲಿ ವಿವರಿಸಲಾದ ಎಲ್ಲಾ ಅಂಶಗಳನ್ನು ಕೂಲಂಕಶವಾಗಿ ಪರಿಶೀಲಿಸಿ, ಶ್ರೀ ಹೆಚ್.ಇ. ರಾಜಶೇಖರಪ್ಪ, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದ ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರವಾಗಿರುವ ನಾನು, ಈ ಇಲಾಖಾ ವಿಚಾರಣೆ ಪ್ರಕರಣದಲ್ಲಿ ಆರೋಪಿತ ಸರ್ಕಾರಿ ನೌಕರನಾದ ಹಾಗೂ ಈ ನಿರ್ದೇಶನಾಲಯದ ಸಾಂಖ್ಯಿಕ ನಿರೀಕ್ಷಕರ ವೃಂದಕ್ಕೆ ಸೇರಿದ ಶ್ರೀ ಆರ್.ಎಂ. ಕುಲಕರ್ಣಿ, ಸಾಂಖ್ಯಿಕ ನಿರೀಕ್ಷಕರು, ಅಮಾನತ್ತಿಲ್ಲಿದ್ದ ಸದರಿಯವರು ಸೇವೆಗೆ ಪುನರ್ ಸ್ಥಾಪನೆಗೊಂಡು ಪ್ರಸ್ತುತ ತಾಲ್ಲೂಕು ಕಚೇರಿ,ಸಿಂಧನೂರು (ರಾಯಚೂರು ಜಿಲ್ಲೆ) ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಇವರ ವಿರುದ್ಧ ಹೊರಿಸಲಾದ ದೋಷಾರೋಪಣೆಗೆ ಸಂಬಂಧಿಸಿದ ಇಲಾಖಾ ವಿಚಾರಣಾ ವರದಿಯನ್ನು ಪರಿಶೀಲಿಸಿದ್ದೇನೆ. ಸದರಿ ಸರ್ಕಾರಿ ನೌಕರನ ಮೇಲೆ ಹೊರಿಸಿದ ಆರೋಪಗಳು ಸಂಪೂರ್ಣವಾಗಿ ರುಜುವಾತಾಗಿದ್ದನ್ನು ಪರಿಗಣಿಸಿ, ಆತನಿಗೆ ಈ ಕೆಳಗೆ ತಿಳಿಸಲಾದ ದಂಡನೆ ವಿಧಿಸಲಾಗಿದೆ:

ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ; 8(vi) ರ ಅನ್ವಯ ಶ್ರೀ ಆರ್.ಎಂ. ಕುಲಕರ್ಣಿ, ಈ ನಿರ್ದೇಶನಾಲಯದ ಸಾಂಖ್ಯಿಕ ನಿರೀಕ್ಷಕರು, (ಪ್ರಸ್ತುತ ತಾಲ್ಲೂಕು ಕಚೇರಿ,

ಸಿಂಧನೂರು ತಾಲ್ಲೂಕು, ರಾಯಚೂರು ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿರುವವರು) ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಿ ಆದೇಶಿಸಲಾಗಿರುತ್ತದೆ.

**ಹೆಚ್.ಇ. ರಾಜಶೇಖರಪ್ಪ**

ಪಿ.ಆರ್.824 ನಿರ್ದೇಶಕರು ಮತ್ತು ಶಿಸ್ತು ಪ್ರಾಧಿಕಾರ.

**PROFORMA**

**OFFICE OF THE ASSISTANT COMMISSIONER OF COMMERCIAL TAXES, L.V.O.250, CHIKMAGALUR**

| Sl. No. | Code No. of C.Forms | Name & Addreses of the dealer to whoom the declaration forms issued by the Department with date of C.Forms issued | Registration certificate No.of the dealer under CST Act.1956 TIN No. | The addreses of the dealer to whoom the declaration form sent | Date of issue of forms by the dealers | Whether Lost/ Stolen/ distined | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | M.073447<br>M 073454 | M/s. Raksha Motors, Shambhavi Building, Belur Road, Chikmagalur. Dated:22.02.2006 | 29760011525 | Blanks C Forms | Blank | Lost | To be treated lost in transit |

Asst. Commissioner of Commercial Taxes,
L.V.O.250, Chikmagalur (LVO 250).

**PROCEEDINGS OF ASSISTANT COMMISSIONER OF COMMERCIAL TAXES, L.V.O.250, CHIKMAGALUR**

**Present:** Sri B. Manje Gowda, Dated:18th August, 2009

Assistant Commissioner of Commercial Taxes, Local Vat Office-250, Chikmagalur.

**Sub:** Loss of C Forms bearing Sl.No. M.073447 M 073454 By M/s Raksha Motors, Shambhavi Building, Chikmagalur, Tin No.29760011525.

**Ref:** Letter Dated:10.08.2009.

M/s. Raksha Motors, Shambhavi Building, Belur Road, Chikmagalur, borne on the files of this office having Tin No.29760011525. The dealer has intimated this office that C Forms bearing Sl.No.M.073447, M 073454 (BLANKS) issued by the Department have lost while in transit. The dealer has produced the Copy of Police Complaint Dated:07.03.2009 and publication in the News papers regarding the loss of above said C forms. The dealer also executed the Indemnity Bond Form G. as laid down under the provisions of CST Act 1956 under Rule 12(2) and 12(9) of the CST rules 1956 in favour of the Government, along with an affidavit sworn before notary of Government of Karnataka Since, the C Forms No. M 07344742, M 073454 stated to be lost while in transit, hence, the same is treated as lost. Hence this orders.

**Order No.01/09-10 ACCT/LVO.250 CKM/TIN.No.29760011525, Dated:18th August, 2009**

In view of the circumstances as explained above the C Forms bearing No. M 073447, to M.073454 treated as lost while in transit with immediate effect.

Asst. Commissioner of Commercial Taxes,

PR-813 L.V.O.250, Chikmagalur (LVO 250).

